# ಶ್ರೀ ಬಾಹುಬಲಿ ವಿಜಯಂ

ಮತ್ತು

# ಶ್ರೀ ಗೋಮಟ ಶಿಲ್ಪ

(ಕಥೆ, ಅರ್ಥ, ಟಿಪ್ಪಣಿ ಸಹಿತವಾಗಿ)

ಶ್ರೀ ಡಿ. ವಿ. ಜಿ. ಅವರ ಪ್ರಸ್ತಾವನೆಯೊಡನೆ

ನಾಟಕಕರ್ತೃ:

ಜಿ. ಪಿ. ರಾಜರತ್ನಂ





...ಕ ವಿಚಾರಸಂಸ್ಥೆಯ ವ್ಯಾಸಂಗ ಗೋಷ್ಠಿ

...ಡಿ : : ಬೆಂಗಳೂರು ೪

೨೦, ಡಿಸೆಂಬರ್, ೧೯೫೩

ಬಾಹುಬಲಿಯ ವೃತ್ತಾಂತವು ಗಂಭೀರವಾದ ವಸ್ತು. ಬಾಹುಬಲಿಯು ಜೈನರ ಪುರಾಣಪುರುಷನಾಗಿದ್ದರೂ ಆತನ ಚಾರಿತ್ರವು ಸಮಸ್ತ ಭಾರತೀಯ ಸಂಸ್ಕೃತಿಯ ಅಂತಸ್ತತ್ತ್ವದ ನಿದರ್ಶನವೆಂದು ಹೇಳಬಹುದು. ಪ್ರಪಂಚವೈಭವಕ್ಕಿಂತ ಮೇಲಿನ ಶ್ರೇಯಸ್ಸೊಂದುಂಟು, ಭೌತಶಕ್ತಿಗಿಂತ ಹಿರಿದಾದ ಆತ್ಮಶಕ್ತಿಯೊಂದುಂಟು, ದೃಶ್ಯಕ್ಕಿಂತ ಶಾಶ್ವತವಾದ ಅದೃಶ್ಯಸತ್ತ್ವವೊಂದುಂಟು, ಭೋಗಸೌಖ್ಯಕ್ಕಿಂತ ನಿರ್ಮಲವಾದ ಶಾಂತಿಯ ಆನಂದ ವೊಂದು ಉಂಟು—ಎಂಬೀ ತತ್ತ್ವವನ್ನು ಅವಲಂಬಿಸಿ ಕೃತಕೃತ್ಯವಾದದ್ದು ಆತ್ಮಬಲಿಯಾದ ಬಾಹುಬಲಿಯ ಜೀವ. ಇಂಥ ಆತ್ಮತೇಜಃಪ್ರಧಾನವಾದ ಜೀವದ ಯಾತ್ರೆಯನ್ನೀಗ ಶ್ರೀ ರಾಜರತ್ನಂ ಅವರು ಈ ನಾಟಕ ದಲ್ಲಿ ಉದ್ಧರಿಸಿ ನಿರೂಪಿಸಿರುವುದು.

[ಒಂದೂವರೆ ರೂಪಾಯಿ

# ಶ್ರೀ ಬಾಹುಬಲಿ ವಿಜಯಂ

ಮತ್ತು

# ಶ್ರೀ ಗೋಮಟ ಶಿಲ್ಪ

(ಕಥೆ, ಅರ್ಥ, ಟಿಪ್ಪಣಿ ಸಹಿತವಾಗಿ)

ಶ್ರೀ ಡಿ. ವಿ. ಜಿ. ಅವರ ಪ್ರಸ್ತಾವನೆಯೊಡನೆ

ನಾಟಕಕರ್ತೃ:

ಜಿ. ಪಿ. ರಾಜರತ್ನಂ





ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆಯ ವ್ಯಾಸಂಗ ಗೋಷ್ಠಿ

ಬಸವನಗುಡಿ : : ಬೆಂಗಳೂರು

೨೦, ಡಿಸೆಂಬರ್, ೧೯೫೩

ಮೊದಲನೆಯ ಮುದ್ರಣ:
೨೦, ಡಿಸೆಂಬರ್, ೧೯೫೪





ಮೊದಲನೆಯ ಮುದ್ರಣದ ಲಾಭಾಂಶ
ಬೆಂಗಳೂರಿನ ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆ
ಇವರಿಗೆ ಸೇರುತ್ತದೆ.



ಬೆಲೆ: ಒಂದೂವರೆ ರೂಪಾಯಿ

ಮುದ್ರಕರು:
ಬಿ. ಬಿ. ಡಿ. ಪವರ್ ಪ್ರೆಸ್
ಅರಳೇಪೇಟೆ, ಬೆಂಗಳೂರು

# ನಿವೇದನ

ಸುಮಾರು ಒಂದು ವರ್ಷದ ಹಿಂದೆ ಬೆಂಗಳೂರಿನ ಗೋಖಲೆ ಸಾರ್ವಜನಿಕ ಸಂಸ್ಥೆಯ ವ್ಯಾಸಂಗಗೋಷ್ಠಿಯ ವಾರ್ಷಿಕೋತ್ಸವಕ್ಕೆ ಒಂದು ನಾಟಕ ಬರೆದುಕೊಡುವೆನೆಂದು ಒಪ್ಪಿಕೊಂಡಾಗ ಅದು ಹೀಗೆ ಗೊಮ್ಮಟ ಸ್ವರೂಪವನ್ನು ತಾಳಿಕೊಳ್ಳುವುದೆಂದು ನನಗೇ ಕಲ್ಪನೆಯಿರಲಿಲ್ಲ. ಸಂತೆಯ ಹೊತ್ತಿಗೆ ಮೂರು ಮೊಳ ನೇಯುವುದಕ್ಕೆಂದು ಪಂಪಕವಿಯ ಆದಿಪುರಾಣದ ಹದಿನಾಲ್ಕನೆಯ ಆಶ್ವಾಸವನ್ನು ಹೊಕ್ಕವನು ಅಲ್ಲಿಂದ ಶ್ರವಣಬೆಳ್ಗೊಳ ಕ್ಷೇತ್ರದ ಶ್ರೀ ಗೋಮಟೇಶ್ವರ ಸ್ವಾಮಿಯ ಭದ್ರಬಾಹುಗಳ ಗಾಢನಿಷ್ಪೀಡನಕ್ಕೆ ಒಳಗಾಗಿ, ಈ ಕೃತಿ ಹೀಗೆ ಹೊರಗೆ ಬಂದು, ನನಗೆ ಕೃತಾರ್ಥತೆಯನ್ನು ಕರುಣಿಸಿಕೊಟ್ಟಿದೆ.

ಯಾವ ಒಳ್ಳೆಯ ಹೊತ್ತಿನಲ್ಲಿ ನನ್ನ ಮನಸ್ಸು ಈ ವಸ್ತುವಿಗೆ ಮೀಸಲಾಯಿತೋ—ಅದು ಈ ಆಕಾರಕ್ಕೆ ಬರುವುದಕ್ಕೆ ಬೇಕಾದ ಸಹಾಯಸ್ಫೂರ್ತಿಗಳೆಲ್ಲ ಒಂದರ ಹಿಂದೆ ಒಂದು ಹೂವೆತ್ತಿದಂತೆ ಪವಣಿಸಿಕೊಂಡು ಬಂದವು. 'ಬಾಹುಬಲಿ ವಿಜಯ'ದ ಮೊದಲ ಹಸ್ತಪ್ರತಿಯ ಅರಕೆಗಳನ್ನು ಶ್ರೀ ಎಸ್. ವೆಂಕಟಾಚಲಪತಿ ತುಂಬಿ ತಿದ್ದಿದರು; ಪಂಪನ ಹಳಗನ್ನಡಕ್ಕೆ ತಮ್ಮ ಮುಖಗಳನ್ನು ಶಿಕ್ಷಿಸಿಕೊಳ್ಳುತ್ತೇವೆಂದು ವ್ಯಾಸಂಗಗೋಷ್ಠಿಯ ಮಿತ್ರರು ಮನಸ್ಸು ದೃಢಮಾಡಿದರು; ಅವರ ಶಿಕ್ಷಣದ ಮೇಲ್ವಿಚಾರಣೆಯನ್ನು ಶ್ರೀ ಆರ್. ಎಸ್. ರಾಮರಾಯರು ವಹಿಸಿಕೊಂಡರು; ನೇಪಥ್ಯಗಾನಗಳನ್ನು ಗಮಕ ವಿದ್ವಾನ್ ಶ್ರೀ ಎಂ. ರಾಘವೇಂದ್ರರಾಯರು ನಿರ್ವಹಿಸಿದರು; ಹಿನ್ನೆಲೆಯ ಸಂಗೀತವನ್ನು ವೈಣಿಕವಿದ್ವಾನ್ ಗಾನವಿದ್ಯಾವಿಶಾರದ ಶ್ರೀ ಎಲ್. ರಾಜಾರಾಯರು ಸಂಯೋಜಿಸಿ ನಡಸಿಕೊಟ್ಟರು. ಇಷ್ಟೆಲ್ಲ ಸಾಮರ್ಥ್ಯ ಪಟುತ್ವ ನಿರ್ವಹಣಗಳ ಫಲವಾಗಿ 'ಬಾಹುಬಲಿ ವಿಜಯ'ವು ನಿಜವಾಗಿಯೂ ವಿಜಯವೇ ಆದದ್ದು ಅಂದಿನ ಪ್ರೇಕ್ಷಕರಿಗೆ ಸಂತೋಷವಾಯಿತು. ಅಂಥವರಲ್ಲಿ ಒಬ್ಬರಾದ ಶ್ರೀ ಪು. ತಿ. ನ. ಅವರು ಅಂದಿನ ಪ್ರಯೋಗವನ್ನು 'ಜನಪ್ರಗತಿ'ಯಲ್ಲಿ ಪ್ರಶಂಸಿಸಿದರು. 'ಬಾಹುಬಲಿ ವಿಜಯ'ವನ್ನು ವ್ಯಾಸಂಗಗೋಷ್ಠಿ ಪುಸ್ತಕವಾಗಿ ಪ್ರಕಟಿಸಲು ಬಯಸುವುದೆಂಬ ಸೂಚನೆಯೂ ಮರುದಿವಸವೇ ಪ್ರಸ್ತಾಪವಾಯಿತು.

ಪುನಃ, ಅದು ಯಾವ ಒಳ್ಳೆಯ ಹೊತ್ತಿನಲ್ಲಿ ಈ ವಸ್ತುವಿಗೆ ನನ್ನ ಮನಸ್ಸು ಮೀಸಲಾಯಿತೋ—ಆ ಪುಣ್ಯಾಸ್ರವದ ಸಕೃತ್ಫಲವಿದು ಎಂಬಂತೆ ೫-೩-೫೩ ರಲ್ಲಿ ನಡೆದ ಶ್ರೀ ಗೋಮಟ ಮಹಾಮಸ್ತಕಾಭಿಷೇಕದ ವರದಿಯನ್ನು ಪ್ರಸಾರಮಾಡಲು ಆಲ್ ಇಂಡಿಯಾ ರೇಡಿಯೋ ನನ್ನನ್ನು ಕರೆಸಿ, ಅದರಿಂದ ನನಗೆ ಅಪೂರ್ವವಾದ ಅಲಭ್ಯ ಲಾಭವಾಯಿತು; ಮತ್ತೆ, ೧೬-೩-೫೩ ಯುಗಾದಿಯ ಶುಭದಿವಸ ಜೈನ ತಾಯಿಯೊಬ್ಬರು ಬಡಿಸಿದ ಪರಮಾನ್ನವನ್ನುಂಡು, ಗೋಮಟಜಿನನ ಮಸ್ತಕಾಭಿಷೇಕವನ್ನು ಮತ್ತೊಮ್ಮೆ ನೋಡುವ ಭಾಗ್ಯ ಒದಗಿತು; ಮತ್ತೊ ಒಮ್ಮೆ ೧೦-೫-೫೩ ರಂದು ಶ್ರೀ ಕೆ. ಎಸ್. ಧರಣೇಂದ್ರಯ್ಯನವರ ಸ್ನೇಹದಿಂದ ಮೂರನೆಯ ಬಾರಿ ಮಹಾಮಸ್ತಕಾಭಿಷೇಕದ ದಿವ್ಯದರ್ಶನವಾಗಿ, ವಿಮಾನದಿಂದ ಪುಷ್ಪವೃಷ್ಟಿಯಾದುದನ್ನೂ ಕಂಡೆ. ಹೀಗೆ ಮುಪ್ಪುರಿಗೊಂಡ ಸಮ್ಯಕ್‌ದರ್ಶನಗಳ ಸಂಚಿತಫಲವಾಗಿ 'ಶ್ರೀ ಬಾಹುಬಲಿ ವಿಜಯ'ದ ಮುಂದಿನ ಭಾಗವಾದ 'ಶ್ರೀ ಗೋಮಟ ಶಿಲ್ಪ' ನನಗೆ ಲಭಿಸಿತು.

ನನ್ನ ಈ ಎರಡು ಲಾಭಗಳನ್ನೂ ಈಗ ಗೋಖಲೆ ಸಾರ್ವಜನಿಕ ಸಂಸ್ಥೆಯ ವ್ಯಾಸಂಗಗೋಷ್ಠಿಯು ಪುಸ್ತಕ ರೂಪದಲ್ಲಿ ಪ್ರಕಟಿಸಿದೆ. ಬೆಳ್ಗುಳದ ಬಾಹುಬಲಿ ಸ್ವಾಮಿಯ ಸುತ್ತ 'ಗಂಗರಾಜ ಸುತ್ತಾಲಯ'ವಿದ್ದಂತೆ ಇರುವ ಶ್ರೀ ಡಿ. ವಿ. ಜಿ. ಅವರ ಪ್ರಸ್ತಾವನೆಯ ಪ್ರಾಕಾರವನ್ನು ಹಾಯ್ದು ಬಂದು, ಒಳಗಿರುವ ಶ್ರೀ ಬಾಹುಬಲಿ ಶ್ರೀ ಚಾವುಂಡರಾಜಾದಿಗಳನ್ನು ಸಂದರ್ಶಿಸುವ ಸಭ್ಯರಿಗೆ ನಮ್ಮ ಪೂರ್ವಕವಿಶ್ರೇಷ್ಠರ ವಾಕ್ಯಮಾಣಿಕ್ಯಕೋಶಗಳಿಂದ ಸದಾ ಪ್ರೀತಿ ಸಂತೋಷಗಳು ಉಂಟಾಗುತ್ತಿರಲಿ.

೧೫-೧೨-೫೩
ಬೆಂಗಳೂರು

ಜಿ. ಪಿ. ರಾಜರತ್ನಂ.

# ಪ್ರಸ್ತಾವನೆ

ಬೆಂಗಳೂರಿನ ಗೋಖಲೆ ಸಾರ್ವಜನಿಕವಿಚಾರ ಸಂಸ್ಥೆಯ ಅಂಗವಾದ ವ್ಯಾಸಂಗಗೋಷ್ಠಿಯು ತನ್ನ ಐದನೆಯ ವಾರ್ಷಿಕೋತ್ಸವವನ್ನು ೧೯೫೨ನೆಯ ಡಿಸೆಂಬರ್ ೧೪ನೆಯ ತಾರೀಖು ಭಾನುವಾರ ನೆರವೇರಿಸಿತು. ಆ ಸಂತೋಷ ಸಮಯದಲ್ಲಿ ಒಂದು ನಾಟಕವನ್ನಾಡಬೇಕೆಂದು ಆ ಗೋಷ್ಠಿಯ ಕಾರ್ಯ ಕರ್ತರು ಸಂಕಲ್ಪಿಸಿ, ಅದಕ್ಕೆ ಒಪ್ಪುವ ಸಾಹಿತ್ಯವನ್ನು ರಚಿಸಿಕೊಟ್ಟು ಸಹಾಯ ಮಾಡಬೇಕೆಂದು ಗೋಷ್ಠಿಯ ಅಭಿಮಾನಿಗಳಾದ ಶ್ರೀಮಾನ್ ಜಿ. ಪಿ. ರಾಜ ರತ್ನಂ ಅವರನ್ನು ಕೇಳಿಕೊಂಡಿದ್ದರು. ಶ್ರೀ ರಾಜರತ್ನಂ ಅವರು ಅದರಂತೆ ತಯಾರುಮಾಡಿಕೊಟ್ಟ "ಶ್ರೀ ಬಾಹುಬಲಿ ವಿಜಯ"ವು ಈ ಪುಸ್ತಕದಲ್ಲಿ ಮೊದಲ ಭಾಗವಾಗಿದೆ. ಅವರು ಆ ನಾಟಕವನ್ನು ಪಂಪಾದಿ ಪೂರ್ವ ಮಹಾ ಕವಿಗಳಿಂದ ಸಂಕಲನಮಾಡಿದ್ದು ಮಾತ್ರವಲ್ಲದೆ, ನಾಟಕಾಭಿನಯಕ್ಕೆ ನಮ್ಮ ತರುಣ ಸದಸ್ಯರನ್ನು ತಿದ್ದಿ ತಯಾರುಮಾಡಿದರು. ವೈಣಿಕ ವಿದ್ವಾನ್ ಶ್ರೀ ಎಲ್. ರಾಜಾರಾಯರವರು ಕಥಾ ಪ್ರಕರಣಗಳಿಗೆ ಅನುಗುಣವಾಗಿ ರಾಗ ಯೋಜನೆಮಾಡಿ ದೃಶ್ಯಕಾವ್ಯವನ್ನು ಶ್ರಾವ್ಯವಾಗಿಸಿದರು. ನಮ್ಮ ನಟರನ್ನು ಸಿದ್ಧಪಡಿಸುವುದರಲ್ಲಿ ಶ್ರೀ ಆರ್. ಎಸ್. ರಾಮರಾಯರೂ ಇತರ ಮಿತ್ರರೂ ಸಹಾಯವಾದರು. ಆ ಸಂಜೆ ನಾಟಕ ನೋಡಿದ ಸಭೆ ಅದನ್ನು ಮೆಚ್ಚಿ ಕೊಂಡಿತು. ಆ ದೊಡ್ಡ ಸಭೆಯಲ್ಲಿ ಬಹು ಮಂದಿ ವಿದ್ವಾಂಸರೂ ಸಾಹಿತ್ಯ ಸಾರಜ್ಞರೂ ಇದ್ದರು. ಅವರಲ್ಲಿ ಅನೇಕರು ಇಂಗ್ಲಿಷ್ ಕಾವ್ಯ ನಾಟಕಗಳ ರಸ ಭಾವಗಳಲ್ಲಿ ಆಲೋಡನೆ ಮಾಡಿದ್ದವರು.

ಅಂಥ ರಸಿಕರಲ್ಲಿ ಕೆಲವರು—"ಕನ್ನಡ ರಂಗವೇದಿಕೆಯ ಮೇಲೆ ಹೀಗೆ ಕಂದಪದ್ಯಗಳನ್ನೂ ವೃತ್ತಗಳನ್ನೂ ನಾವು ಕೇಳಿ ಸಂತೋಷಪಟ್ಟು ಎಷ್ಟು ಕಾಲವಾಯಿತು! ಈ ಹೊತ್ತಿನ ನಾಟಕದಿಂದ ನಮಗೆ ಎಂಥ ಅಪೂರ್ವವಾದ ಅನುಭವವಾಯಿತು! ಕನ್ನಡದಲ್ಲಿ ಎಷ್ಟು ಒಳ್ಳೆಯ ಸಾಹಿತ್ಯವಿದೆ! ಸಮರ್ಥ ರಾದ ಕಲೆಗಾರರಿದ್ದರೆ ಅದರ ಸ್ವಾರಸ್ಯ ಎಷ್ಟು ಸೊಗಸಾಗಿ ವ್ಯಕ್ತಪಡುತ್ತದೆ!" ಎಂಬೀ ರೀತಿಯಾಗಿ ಮಾತನಾಡಿಕೊಂಡರು.

ಶ್ರೀಮಾನ್ ರಾಜರತ್ನಂ ಅವರು ಆ ನಾಟಕಾಂಶದ ಜೊತೆಗೆ ಈಗ "ಶ್ರೀ ಗೋಮಟ ಶಿಲ್ಪ" ಎಂಬ ಎರಡನೆಯ ಭಾಗವನ್ನು ಸೇರಿಸಿ, ಬಾಹುಬಲಿಚರಿತ್ರೆಯ ಪರಿಪೂರ್ಣಚಿತ್ರವು ವಾಚಕರಿಗೆ ದೊರೆಯುವಂತೆ ಮಾಡಿದ್ದಾರೆ. ಈ ಎರಡು ಭಾಗಗಳಲ್ಲಿಯೂ ಅವರು ಪೂರ್ವಕವಿಗಳ ವಾಕ್ಯಗಳನ್ನೇ ಆರಿಸಿ, ರಂಗವೇದಿಕೆಯ ಸಂಭಾಷಣ ಸರಣಿಗೆ ಅನುಕೂಲಿಸುವಂತೆ ಆ ವಾಕ್ಯಗಳನ್ನಲ್ಲಲ್ಲಿ ಒಡೆದು, ಕೊಂಡಿಗಳನ್ನದುಕಿ, ಸರಪಣಿಯಾಗಿ ಜೋಡಿಸಿ ಅಂದಗೊಳಿಸಿರುವುದು ವಿಶೇಷದ ಸಂಗತಿ. ಅವರು ಯಾವ ಯಾವ ಕವಿಗಳಿಂದ ವಾಕ್ಯಗಳನ್ನು ಸಂಪಾದಿಸಿದ್ದಾರೆಂಬುದು ೫೧ನೆಯ ಮತ್ತು ೮೧ನೆಯ ಪುಟಗಳಲ್ಲಿ ಸೂಚಿತವಾಗಿದೆ. ಪುರಾತನ ಪದ್ಯಕಾವ್ಯ ಗರ್ಭದಲ್ಲಿ ಹುದುಗಿಕೊಂಡಿದ್ದ ರೂಪಕಶಿಶುವನ್ನು ಗುರುತು ಹಿಡಿದು, ಮೂಲಕಥೆಯ ಸಾರಸನ್ನಿವೇಶಗಳನ್ನು ಪ್ರತ್ಯೇಕಮಾಡಿ ಸಂಗ್ರಹಿಸಿ, ಮೂಲಕವಿಯ ರಸಾಭಿವ್ಯಕ್ತಿಯನ್ನು ಎತ್ತಿ ತೋರಿಸಿ, ದರ್ಶನೀಯವಾಗುವಂತೆ ಕಾವ್ಯವನ್ನು ಪುನರ್ನಿರ್ಮಾಣ ಮಾಡಿರುವುದು ಮೂಲಕೃತಿಯ ಪಕ್ಕದಲ್ಲಿ ಕುಳ್ಳಿರಿಸಲರ್ಹವಾದದ್ದೆನಿಸುವಷ್ಟರ ಪ್ರತಿಭಾಕಾರ್ಯವೆಂದು ಹೇಳಬಹುದು.

ಬಾಹುಬಲಿಯ ವೃತ್ತಾಂತವು ಗಂಭೀರವಾದ ವಸ್ತು. ಬಾಹುಬಲಿಯು ಜೈನರ ಪುರಾಣಪುರುಷನಾಗಿದ್ದರೂ ಆತನ ಚಾರಿತ್ರವು ಸಮಸ್ತ ಭಾರತೀಯ ಸಂಸ್ಕೃತಿಯ ಅಂತಸ್ಸತ್ತ್ವದ ನಿದರ್ಶನವೆಂದು ಹೇಳಬಹುದು. ಪ್ರಪಂಚ ವೈಭವಕ್ಕಿಂತ ಮೇಲಿನ ಶ್ರೇಯಸ್ಸೊಂದುಂಟು, ಭೌತಶಕ್ತಿಗಿಂತ ಹಿರಿದಾದ ಆತ್ಮಶಕ್ತಿಯೊಂದುಂಟು, ದೃಶ್ಯಕ್ಕಿಂತ ಶಾಶ್ವತವಾದ ಅದೃಶ್ಯಸತ್ತ್ವವೊಂದು ಉಂಟು, ಭೋಗಸೌಖ್ಯಕ್ಕಿಂತ ನಿರ್ಮಲವಾದ ಶಾಂತಿಯ ಆನಂದವೊಂದು ಉಂಟು—ಎಂಬೀ ತತ್ತ್ವವನ್ನು ಅವಲಂಬಿಸಿ ಕೃತಕೃತ್ಯವಾದದ್ದು ಆತ್ಮಬಲಿಯಾದ ಬಾಹುಬಲಿಯ ಜೀವ. ಇಂಥ ಆತ್ಮತೇಜಃಪ್ರಧಾನವಾದ ಜೀವದ ಯಾತ್ರೆಯನ್ನೀಗ ಶ್ರೀರಾಜರತ್ನಂ ಅವರು ಈ ನಾಟಕದಲ್ಲಿ ಉದ್ಧರಿಸಿ ನಿರೂಪಿಸಿರುವುದು.

ನಾಟಕಕ್ಕೆ ತಕ್ಕ ಭಾಷಣವಿಧಾನ ಯಾವುದು?—ಗದ್ಯವೆ, ಪದ್ಯವೆ, ಹಾಡೆ? ಗದ್ಯವಾದಲ್ಲಿ ಅದು ಬಳಕೆಯ ಮಾತಾಗಿರಬೇಕೆ, ಅಥವಾ ಪ್ರೌಢಶೈಲಿಯದಾಗಿರಬೇಕೆ? ಅದು ಛಂದೋಬದ್ಧವಾಗಿರಬೇಕೆಂದರೆ, ಪ್ರಾಸಾದಿ

ನಿಯಮಗಳಿಗೆ ಒಳಪಟ್ಟಿರಬೇಕೆ ಅಥವಾ ಯಥೇಚ್ಛಾಧೋರಣೆ (*vers libre*) ಯಲ್ಲಿರಬೇಕೆ?—ಇವೇ ಮೊದಲಾದ ಪ್ರಶ್ನೆಗಳು ಹತ್ತಾರು ಇನ್ನೂ ಚರ್ಚೆಯಲ್ಲಿವೆ. ಇಂದಿನ ಆಂಗ್ಲಕವಿಪ್ರಮುಖನಾದ ಟಿ. ಎಸ್. ಎಲಿಯಟ್ (T. S. Eliot) ಎಂಬಾತನು ಈ ಪ್ರಶ್ನೆಯನ್ನು ಈಚೆಗೆ ಚರ್ಚೆಗೆಳೆದು, ತಾನು ಯಾವ ಒಂದು ನಿರ್ಧಾರವನ್ನೂ ಹೇಳಲಾರದವನಾಗಿದ್ದಾನೆ. ಅದರಲ್ಲಿ ಆಶ್ಚರ್ಯಕಾರಣವೇನೂ ಇಲ್ಲ. ಇಂಗ್ಲಿಷ್ ನಾಟಕಕವಿಚಕ್ರವರ್ತಿಯಾದ ಷೇಕ್ಸ್‌ಪಿಯರು (Shakespeare) ತನ್ನ ನಾಟಕಗಳಲ್ಲಿ ಮುಖ್ಯವಾಗಿ ಪ್ರಾಸರಹಿತವಾದ ಸರಳಛಂದಸ್ಸನ್ನು ಅವಲಂಬಿಸಿ ಪದ್ಯವಾಗಿ ಬರೆದಿದ್ದರೂ, ಅಲ್ಲಲ್ಲಿ ವಚನವನ್ನೂ ಪ್ರಾಸವಿಶಿಷ್ಟವಾದ ಪದ್ಯವನ್ನೂ ಹಾಡನ್ನೂ ಸಹ ಉಪಯೋಗಿಸಿದ್ದಾನೆ; ಮತ್ತು ಆತನ ವಚನಭಾಗದಲ್ಲಿ ಗ್ರಾಮ್ಯಪಾತ್ರಗಳ ಬಾಯಿಂದ ಗ್ರಾಮ್ಯಭಾಷೆಯೇ ಹೊರಡುತ್ತದೆ. ಆದರೆ ಷೇಕ್ಸ್‌ಪಿಯರನ ಸರಳಪದ್ಯದ ವಾಗ್ಗುಂಫನ ಗಾಂಭೀರ್ಯವೂ ಓಜಸ್ಸೂ ಎಲ್ಲ ಕವಿಗಳಿಗೂ ಸಾಧ್ಯವಾದುವಲ್ಲ. ಈಚಿನ ಇಂಗ್ಲಿಷ್ ನಾಟಕಕವಿಗಳು,—ಗೋಲ್ಡ್‌ಸ್ಮಿತ್ (Goldsmith), ಷೆರಿಡನ್ (Sheridan) ಮುಂತಾದವರು,—ವಚನದಲ್ಲಿಯೇ ನಾಟಕರಚನೆ ಮಾಡಿರುತ್ತಾರೆ. ಆದರೆ ಈ ನಾಟಕಗಳ ವಸ್ತುವೂ ಷೇಕ್ಸ್‌ಪಿಯರನ ನಾಟಕಗಳ ವಸ್ತುವೂ ಒಂದೇ ಜಾತಿಯವಲ್ಲ. ಷೇಕ್ಸ್‌ಪಿಯರನವು ಉದಾತ್ತವಾದವು; ಗಹನವೂ ಉನ್ನತವೂ ಆದ ಸಂದರ್ಭಗಳು ಅಲ್ಲಿ ತುಂಬಿರುತ್ತವೆ; ಮತ್ತು ಆ ಕಥೆಗಳು ಪೂರ್ವಚರಿತ್ರೆಯಿಂದ ಬಂದವು. ಒಂದು ಪೂರ್ವಕಾಲದ ವಾತಾವರಣವನ್ನು ಕಲ್ಪಿಸಿ, ಆಗಿನ ಪ್ರಮುಖಜನರ ಘನತೆ ಗಾಂಭೀರ್ಯಗಳನ್ನು ಚಿತ್ರಿಸುವುದು ಷೇಕ್ಸ್‌ಪಿಯರನ ಸಂಕಲ್ಪವಾಗಿತ್ತು. ಆ ತೆರದ ಮಹೋದ್ದೇಶಕ್ಕೆ ಉಚಿತವಾದದ್ದು ಆತನು ತಯಾರುಮಾಡಿಕೊಂಡ ಶೈಲಿ. ಈಚಿನ ಕವಿಗಳಾದರೋ ತಮ್ಮ ತಮ್ಮ ಕಾಲದ ಸಾಮಾನ್ಯ ಜೀವನದ ಸಾಮಾಜಿಕ ಚಿತ್ರಗಳನ್ನು ಚಿತ್ರಿಸಿದವರು. ಇವರ ಪ್ರಸಂಗಕ್ಕೆ ತಕ್ಕದ್ದಾದ ದಿನಚರಿಯ ಬಳಕೆಯ ಭಾಷೆಯನ್ನು ಇವರು ಬಳಸಿಕೊಂಡರು. ಈ ಭಾಷಾಶೈಲಿಯ ಚರಿತ್ರೆಯಿಂದ "ವಸ್ತುವಿಗೆ ತಕ್ಕಂತೆ ಭಾಷೆ" ಎಂಬ ಸೂತ್ರ ಹೊರಪಡುತ್ತದೆ. ಆದರೂ ಇಷ್ಟರಿಂದ ನಮ್ಮ ಮುಂದಿರುವ ಪ್ರಶ್ನೆಯೆಲ್ಲಕ್ಕೂ ಉತ್ತರ ದೊರೆಯಿತೆಂದು ಹೇಳಲಾಗದು. ಬರ್ನಾರ್ಡ್ ಷಾ (Bernard Shaw), ಗಾಲ್ಸ್‌ವರ್ದಿ (Gals-

worthy) ಮೊದಲಾದವರು ಬರೆದಿರುವ ನಾಟಕಗಳು ವಚನದಲ್ಲಿಯೇ ಇವೆ. ರಂಗಮಂದಿರದಲ್ಲಿ ಇವೂ ಯಶಸ್ಸನ್ನು ಪಡೆದಿವೆ. ಮೇಲಿನ ಸೂತ್ರವೇ ಇವುಗಳ ವಿಷಯದಲ್ಲಿಯೂ ಹೊಂದುತ್ತದೆ. ವಸ್ತುವಿಗೆ ತಕ್ಕಂತೆ ಶೈಲಿ.

ಎಲಿಯಟ್ ಕವಿಯು ಈ ಸೂತ್ರಕ್ಕಿಂತ ಸೂಕ್ಷ್ಮತರವಾದ ಸೂತ್ರವನ್ನು ಹುಡುಕುತ್ತಾನೆ. ತಾನೇ ಕೆಲವು ಪ್ರಯೋಗ ಪರೀಕ್ಷೆಗಳನ್ನು ನಡಸಿದ್ದಾನೆ. ಆತನು ಬರೆದಿರುವ ನಾಟಕಗಳು—"Murder in the Cathedral" (ಮರ್ಡರ್ ಇನ್ ದಿ ಕೆಥೀಡ್ರಲ್), "The Cocktail Party" (ದಿ ಕಾಕ್‌ಟೆಯಿಲ್ ಪಾರ್ಟಿ) ಇವು—ಸರಳ ಛಂದಸ್ಸಿನಲ್ಲಿವೆ; ಅಲ್ಲಲ್ಲಿ ಪ್ರಾಸಾಲಂಕಾರವೂ ಇರುತ್ತದೆ; ಕೆಲವೆಡೆ ವಚನವೂ ಉಂಟು. ಆ ನಾಟಕಗಳು ಪ್ರೇಕ್ಷಕ ಸಂಖ್ಯೆಯ ದೃಷ್ಟಿಯಿಂದಲೂ ಧನಾಕರ್ಷಣೆಯ ದೃಷ್ಟಿಯಿಂದಲೂ ಪೂರ್ಣ ಜಯವಂತಗಳಾಗಿದ್ದರೂ, ಕೇವಲ ಕಲಾದೃಷ್ಟಿಯಿಂದ ಅಷ್ಟು ಪೂರ್ಣ ಯಶಸ್ವಿಗಳಾಗಿಲ್ಲವೇನೋ ಎಂಬುದು ಆತನ ಶಂಕೆಯಂತೆ! ಅಂಥ ಶಂಕೆಗೆ ಪರಿಹಾರವಿಲ್ಲ; ಏಕೆಂದರೆ ನಾಟಕರಚನೆಯಲ್ಲಿ ಸರ್ವತ್ರ ಸಮನ್ವಯವಾಗುವ ನಿಬಂಧನ ಸೂತ್ರವನ್ನು ಯಾರೂ ರಚಿಸಲಾರರು. ಆ ಕಲೆಯ ಸ್ವಭಾವವೇ ಅಂಥಾದ್ದು. ನಾಟಕಕರ್ತನು ಆರಿಸಿಕೊಳ್ಳುವ ಕಥಾವಸ್ತುವಿನಲ್ಲಿ ಎಂಥೆಂಥ ಸನ್ನಿವೇಶಗಳು ಇರಬಹುದೆಂಬುದನ್ನು ಪೂರ್ವಭಾವಿಯಾಗಿ ನಿಷ್ಕರ್ಷೆಮಾಡುವುದು ಸಾಧ್ಯವಲ್ಲ. ಅಂಥ ಪೂರ್ವನಿಶ್ಚಿತವಾದ ಯೋಜನೆಯೊಂದು ಇದ್ದು ಅದಕ್ಕೆ ವಿಧೇಯನಾಗಿ ಅವನು ಕೆಲಸ ಮಾಡುವುದೆಂದರೆ ಅಂಥವನ ಕೃತಿ ನಿರರ್ಗಳವಾದದ್ದು,—ನೈಜಸಿದ್ಧವಾದದ್ದು,—ಎಂದೆನಿಸಿಕೊಳ್ಳಲಾರದು. ಆ ಪೂರ್ವನಿರ್ಬಂಧದವಷ್ಟು ಮಟ್ಟಿಗೆ ಅದು ಪ್ರತ್ಯಕ್ಷ ಕೃತಕ; ಆದದ್ದರಿಂದ ಅದು ಕಲಾದೃಷ್ಟಿಯಿಂದ ನ್ಯೂನವಾದದ್ದು; ಅದು ರಸನಿಷ್ಯಂದಿಯಾಗಿ ಕೆಲಸಮಾಡಿ ಕೃತಕೃತ್ಯವಾಗಲಾರದು. ನಾಟಕಕರ್ತನು ಸಂಪೂರ್ಣ ಸ್ವತಂತ್ರನಾಗಿ ತನ್ನ ಅಂತಃಪ್ರತಿಭೆಯೊಂದನ್ನೇ ಅನುಸರಿಸಿ ಕೆಲಸಮಾಡುವವನಾದಲ್ಲಿ ಅವನ ಕಲ್ಪನೆಗಳು ನೂರಾರು ಬಗೆಯಾಗುತ್ತವೆ. ಅವು ಹೇಗೆಹೇಗೋ ಅನಿರೀಕ್ಷಿತ ರೀತಿಯಲ್ಲಿ ಬೆಳೆಯುತ್ತ ಹೋಗುತ್ತವೆ. ಅಂಥ ಅಪೂರ್ವ ಸಂದರ್ಭಗಳಿಗೆ ತಕ್ಕ ಭಾಷೆ ಒಂದೇ ತೆರದ್ದಾದೀತೆಂದು ಹೇಳಲಾಗುವುದಿಲ್ಲ. ಎಷ್ಟೋ ಕಥಾಸಂದರ್ಭಗಳ ಕಾವಿಗೆ,—ಅಲ್ಲಿಯ ಅಗಾಧತೆಗೆ,—ತಕ್ಕ ವಾಕ್ಯತೀಕ್ಷ್ಣತೆ ಕೇವಲ ವಚನದಲ್ಲಿ ಲಭ್ಯವಾಗದು.

ಅಂಥಾ ಸಂದರ್ಭದ ವಾಕ್ಕು ಅಸಾಧಾರಣ ಶಕ್ತಿಯುಳ್ಳದ್ದಾಗಿರಬೇಕು. ಅಂಥ ಶಕ್ತಿಯು ವಾಕ್ಕಿಗೆ ಪದವಿಶೇಷದಿಂದ ಬಂದೀತೆ, ವಿಚಿತ್ರಬಂಧದಿಂದ ಬಂದೀತೆ, ಛಂದಸ್ಸಿನಿಂದ ಬಂದೀತೆ, ಪ್ರಾಸಾದಿ ಶಬ್ದಚಿತ್ರಗಳಿಂದ ಬಂದೀತೆ? ನಮಗೆ ಬೇಕಾದದ್ದು ವಾಕ್ಕಿನಲ್ಲಿ ಒಂದು ತೀವ್ರತೆ, ಒಂದು ಸೂಕ್ಷ್ಮಾಗ್ರತೆ, ಒಂದು ಓಜೋಗುಣ. ಇದಕ್ಕೆ ಕೆಲವು ವೇಳೆ ವಚನ ಸಾಧಕವಾಗಬಹುದು; ಕೆಲವು ವೇಳೆ ಪದ್ಯ ಸಾಧಕವಾಗಬಹುದು; ಕೆಲವು ವೇಳೆ ಎರಡೂ ಸಾಲದೆ ಹಾಡೂ ಬೇಕಾಗಬಹುದು. ಯಾವ ಯಾವ ಸಂದರ್ಭದಲ್ಲಿ ಯಾವಯಾವುದು ಸರಿ, ಅವು ಬೆರೆತಿರಬೇಕಾದರೆ ಯಾವಯಾವ ಪ್ರಮಾಣದಲ್ಲಿ ಸೇರಿರಬೇಕು?—ಇವು ಕವಿಗಿರುವ ಪ್ರಶ್ನೆಗಳು. ಇವಕ್ಕೆ ಉತ್ತರಗಳನ್ನು ಅವನು ತನ್ನೊಳಗೇ ಕಂಡುಕೊಳ್ಳಬೇಕು. ಅವನಿಗೆ ಸೂತ್ರಸಹಾಯವನ್ನು ಇತರರು ಒದಗಿಸಲಾರರು.

ಕನ್ನಡದಲ್ಲಿ ನಾಟಕರಚನೆ ಪ್ರಾರಂಭವಾದಾಗಿನಿಂದ ಮೊನ್ನೆ ನಿನ್ನೆಯ ವರೆಗೂ ನಾಟಕವು ಪದ್ಯ ವಚನ ಗೀತ ಸಮ್ಮಿಶ್ರಿತವಾಗಿಯೇ ಇರುತ್ತಿತ್ತು. ಅದು ಸಂಸ್ಕೃತದ ಪದ್ಧತಿ. ಭಾಸ ಕಾಲಿದಾಸಾದಿಗಳ ನಾಟಕಕೃತಿಗಳಲ್ಲಿ ನಾನಾ ಪಾತ್ರಗಳು ಸಾಮಾನ್ಯವಾಗಿ ವಚನವನ್ನೂ, ಭಾವಾತಿರೇಕದ ಮತ್ತು ವಿಚಾರಾತಿಶಯದ ಪ್ರಸಕ್ತಿಯಲ್ಲಿ ಪದ್ಯವನ್ನೂ ಆಡುತ್ತಾರೆ. ಸುಸಂಸ್ಕೃತರ ಬಾಯಿಂದ ಸಂಸ್ಕೃತವೂ ಪ್ರಾಕೃತ ಜನರ ಬಾಯಿಂದ ಪ್ರಾಕೃತ ಭಾಷೆಯೂ ಬರುತ್ತವೆ. ಕನ್ನಡದವರು ಅದೇ ಸಂಪ್ರದಾಯವನ್ನು ಅನುಸರಿಸಿದರು. ಕ್ರಿ. ಶ. ಸುಮಾರು ೧೭೦೦ ರಲ್ಲಿ ಬರೆದ "ಮಿತ್ರವಿಂದಾ ಗೋವಿಂದ" ನಾಟಕದ ಕಾಲದಿಂದ ಶ್ರೀ ಬಿ. ಎಂ. ಶ್ರೀಕಂಠಯ್ಯನವರ ಕಾಲದವರೆಗೂ—ಸುಮಾರು ೨೫೦ ವರ್ಷ ಕನ್ನಡ ನಾಟಕಗಳು ಗದ್ಯ ಪದ್ಯಗಳೆರಡರ ಮಿಶ್ರಣವಾಗಿರುತ್ತಿದ್ದವು. ಪದ್ಯವೆಂಬುದರಲ್ಲಿ ಹಾಡೂ ಸೇರಿರುತ್ತಿತ್ತು. ಪದ್ಯಭಾಗವೆಲ್ಲ ರಂಗದಲ್ಲಿ ಸಂಗೀತ ಸಂಪನ್ನವಾಗಿರುತ್ತಿತ್ತು. ಸಂಸ್ಕೃತದಿಂದ ಕನ್ನಡಕ್ಕೆ ಬಂದ ಶಾಕುಂತಲಾದಿಗಳಲ್ಲಿ ಮಾತ್ರವಲ್ಲದೆ ಇಂಗ್ಲಿಷಿನಿಂದ ಬಂದ "ಶೂರಸೇನ ಚರಿತ್ರೆ" (Othello= ಒಥೆಲೊ) ಮೊದಲಾದ ನಾಟಕಗಳಲ್ಲಿಯೂ ಈ ಲಕ್ಷಣ ಕಾಣಬರುತ್ತಿತ್ತು. ಆ ಕಾಲದ ಪ್ರೇಕ್ಷಕರೂ ವಾಚಕರೂ ಆ ನಾಟಕಗಳನ್ನು ಮೆಚ್ಚಿಕೊಂಡಿದ್ದರು. ಪ್ರಸಿದ್ಧ ನಟರಾದ ಎ. ವಿ. ವರದಾಚಾರ್ಯರೂ ಅವರ ಪೂರ್ವಿಕರಾದ ಗೌರಿ ನರಸಿಂಹಯ್ಯ ಮೊದಲಾದವರೂ ಜನದ ಅಪಾರವಾದ ಮೆಚ್ಚಿಗೆಯನ್ನು

ಸಂಪಾದಿಸಿದ್ದು ಸಂಗೀತ ಸಂಮಿಶ್ರಿತ ನಾಟಕಾಭಿನಯದಿಂದಲೇ. ಆವು ಅಭಿನಯಕ್ಕೆ ಆ ಸಂಗೀತ ವಾತಾವರಣವು ಚೈತನ್ಯವನ್ನು ತಂದಿತ್ತು. ಆಗಿನ ಜನ ಇಂದಿನವರಷ್ಟು ಸಂಸ್ಕೃತರಲ್ಲವ್ರೋ ಏನೋ! ಅವರ ಅಂದಿನ ಸಂಸ್ಕೃತಿಯ ಮಟ್ಟಕ್ಕೆ ಆ ಹಳೆಯ ನಾಟಕ ಪದ್ಧತಿ ಒಪ್ಪಿತ್ತೆಂಬುದಂತೂ ನಿರ್ವಿವಾದವಾದ ಸಂಗತಿಯಾಗಿದೆ. ಆದರೆ ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಕನ್ನಡ ನಾಟಕ ಕರ್ತರು ಆ ತೆರದ ಮಿಶ್ರಣಪದ್ಧತಿಯನ್ನು ಬಿಟ್ಟು ಹೊಸ ಶೈಲಿಯನ್ನು ಹುಡುಕ ಹೊರಟಿದ್ದಾರೆ. ಹಳೆಯ ಭಾಷಾಸಂಪ್ರದಾಯವು ನಿರ್ವೀರ್ಯವಾಯಿತೆಂದು, —ಅದರಲ್ಲಿದ್ದ ಸತ್ತ್ವ ಹಾರಿಹೋಯಿತೆಂದು.—ಅವರು ಭಾವಿಸಿರಬಹುದು.

ಆ ಭಾವನೆ ಸಕಾರಣವಾದದ್ದೆಂದೆನಿಸುವ ಸಂದರ್ಭಗಳು ಕೆಲವು ಇರಲಿಲ್ಲ ವೆಂದು ನಾನು ವಾದಿಸಲಾರೆ. ಹೊಸಹೊಸ ಪ್ರಯೋಗಗಳೂ ಹೊಸ ಶೈಲಿಯ ಬಯಕೆಯೂ ಅನುಚಿತವೆಂದು ನಾನು ಹೇಳತಕ್ಕವನಲ್ಲ. ಹೊಸ ವಿಧಾನ ನಮಗೆ ಅವಶ್ಯವಾಗಿ ಬೇಕಾಗಿದೆ. ಆದರೆ ಹಳೆಯ ವಿಧಾನ ಈಗ ಪೂರ್ತಿ ನಿಸ್ಸಾರವಾಗಿದೆಯೆಂಬುದನ್ನು ಮಾತ್ರ ನಾನು ಒಪ್ಪಲಾರೆ. ಛಂದೋಬದ್ಧವೂ ಪ್ರಾಸಲಕ್ಷಿತವೂ ಆದ ಪದ್ಯ, ರಾಗಾಲಂಕೃತವಾದ ಹಾಡು—ಇವು ಸಹಜತೆಗೆ ವಿರೋಧವೆಂದೂ ಕೃತಕಚಿಹ್ನೆಗಳೆಂದೂ ಕೆಲವರ ಮತ. ಹಾಗಾದರೆ ಕೃತಕ ವಿಲ್ಲದೆ ನಾಟಕವುಂಟೋ? ತತ್ತ್ವವನ್ನು ನೋಡುವುದಾದರೆ ನಾಟಕವೆಂಬು ದೆಲ್ಲ ಒಂದು ಕೃತಕವೇ ಅಲ್ಲವೆ? ಕವಿಗಿರುವ ಪ್ರಶ್ನೆ ತನ್ನ ಕಲ್ಪನೆಯೂ ವಾಕ್ಕೂ ಕೃತಕ ಹೌದೆ, ಅಲ್ಲವೆ? ಎಂಬುದಲ್ಲ; ಸಹಜತೆಯ ಭ್ರಾಂತಿ ಅವುಗಳಿಂದ ಓದುಗನಲ್ಲಿ (ನೋಟಕನಲ್ಲಿ) ಉಂಟಾಗುತ್ತದೆಯೆ, ಇಲ್ಲವೆ—ಎಂಬುದು. ಕವಿ ನಮಗೆ ಒದಗಿಸಬೇಕಾದದ್ದು ಸತ್ಯದ ಬಾಹ್ಯ ಚಿತ್ರವನ್ನಲ್ಲ; ಸತ್ಯದ ಅಂತಶ್ಚಿತ್ರ ವನ್ನು. ಅವನು ತೋರಿಸುವ ಘಟನೆ ನಮಗೆ ಸಾಧ್ಯ, ಸಂಭಾವ್ಯ ಎನ್ನಿಸ ಬೇಕು. ಇದನ್ನು ಇಂಗ್ಲಿಷಿನಲ್ಲಿ "Verisimilitude" (ಯಥಾರ್ಥ ಸಾದೃಶ್ಯ, ಸತ್ಯಾವಭಾಸ) ಎನ್ನುತ್ತಾರೆ. ಯಾವ ಸನ್ನಿವೇಶವನ್ನು ಕವಿ ತನ್ನ ದೃಷ್ಟಿಯಲ್ಲಿರಿಸಿ ಕೊಂಡಿರುತ್ತಾನೋ ಆ ಸನ್ನಿವೇಶದ ಅನುಭವವನ್ನು ಅವನ ಮಾತು ನಮ್ಮ ಅಂತರಂಗದೊಳಗೆ ಉಂಟಾಗಿಸಬೇಕು. ಮಾತನ್ನು ಹೀಗೆ ಕಾರ್ಯಕಾರಿ ಯಾಗುವಂತೆ ಉಪಯೋಗಿಸಿದರೆ ಕವಿಗೆ ಜಯಸಿದ್ಧಿ. ಹಾಗೆ ಮಾತನ್ನು ಜೋಡಿಸುವುದರಲ್ಲಿ ಅವನು ವಿಶೇಷ ಸಂವಿಧಾನಗಳನ್ನು ಉಪಯೋಗಿಸಿಕೊಂಡ

ದ್ದಾದರೆ ಅದನ್ನು ಕೃತಕವೆನ್ನುವುದು ಒಂದು ನಿರರ್ಥಕ ಟೀಕೆ. ನಮ್ಮ ಜೀವಿತ ವ್ಯವಹಾರಗಳಲ್ಲಿ ಎಷ್ಟೋ ಭಾಗ ಕೃತಕವಾದದ್ದಲ್ಲವೆ? ಅಕ್ಕಿಯನ್ನು ಬೇಯಿಸಿ ಅನ್ನ ಮಾಡುವುದು ಕೃತಕವೆಂದು ಯಾರಾದರೂ ಹೇಳಿದರೆ ನಾವು ಅಲ್ಲವೆನ್ನಬಾರದೀತೆ? ಮೈಗೆ ವಸ್ತ್ರಾಲಂಕಾರಗಳನ್ನು ತೊರಿಸುವುದೂ ಹಾಗೆಯೇ ಕೃತಕ. ಪೋಲೀಸಿನವನ ಉಡುಪೂ ಶಿಪಾಯಿಯ ಕಾಲ್ನಡಿಗೆಯೂ ಕೃತಕ ಗಳೇ. ಒಂದಾನೊಂದು ಕ್ರಿಯೆಯನ್ನು ಕೃತಕವೆಂದು ಕರೆದ ಮಾತ್ರದಿಂದ ಅದು ಅನುಚಿತವೆಂದು ಸಾಧಿಸಿದಂತಾಗದು. ಕವಿಯ ಭಾಷಾಪ್ರಯೋಗವು ಕೃತಕವೋ ಸ್ವಜವೋ,—ಅದರಿಂದ ಪ್ರೇಕ್ಷಕನ ಅಥವಾ ವಾಚಕನ ಮನಸ್ಸಿನ ಮೇಲೆ ಉದ್ದಿಷ್ಟ ಪರಿಣಾಮವಾಯಿತೆ, ಇಲ್ಲವೆ ಎಂಬುದು ಪ್ರಶ್ನೆ. ಆ ಪರಿಣಾಮವಾಗಿದ್ದರೆ,—ಕವಿಯ ಪದಪ್ರಯೋಗದಿಂದ ಪ್ರೇಕ್ಷಕನ ಮನಸ್ಸು ಚಲಿಸಿದ್ದರೆ,—ಅದು ಅವನಿಂದ "ಆಹಾ!" ಎನ್ನಿಸಿದ್ದರೆ,—ಅವನೊಂದು ಕ್ಷಣ ಮೈ ಮರೆತಿದ್ದರೆ,—ಆ ಪದಪ್ರಯೋಗ ಸಾರ್ಥಕವಾಯಿತು. ಅದು ಕೃತಕವೆ, ಸಹಜವೆ? ಎಂಬ ಪ್ರಶ್ನೆ ಆಗ ಅಪ್ರಸಕ್ತವಾಯಿತು.

ಹರಿಶ್ಚಂದ್ರನು ರುದ್ರಭೂಮಿಯಲ್ಲಿ ಕಾವಲುಗಾರನಾಗಿದ್ದಾಗ ಚಂದ್ರಮತಿಯು ರೋಹಿತಾಶ್ವಶವದೊಡನೆ ಅಲ್ಲಿಗೆ ಬಂದದ್ದನ್ನು ನೋಡಿ ಅವನು ಪದ್ಯ ಹಾಡುವುದು ಸಹಜವೆ? ಕೃತಕವಲ್ಲವೆ?—ಎಂದರೆ, "ಹರಿಶ್ಚಂದ್ರನಿಗಾದ ಪರೀಕ್ಷೆ ನಮಗಾರಿಗಾದರೂ ಆಗಿದೆಯೆ? ಆದಾಗಿದ್ದರೆ ಆಗ ನಾವು ಹರಿಶ್ಚಂದ್ರನಂತೆ ಪ್ರತಿಚರ್ಯೆ ಚರಿಸಿದೆವೆ? ಲೋಕದಲ್ಲಿ ಅದು ಕಾಣಬಾರದ್ದು; ಆದದ್ದರಿಂದ ಆ ಕಥೆ ಅಸ್ವಾಭಾವಿಕವಲ್ಲವೆ? ರಾಜನು ರುದ್ರಭೂಮಿಯ ಭೃತ್ಯನಾಗುವುದೂ, ಸತ್ಯಕ್ಕಾಗಿ ಪತ್ನೀಪುತ್ರರನ್ನು ಮಾರುವುದೂ ಕೃತಕವಲ್ಲವೆ?" ಎಂದು ಮರುಪ್ರಶ್ನೆ ಕೇಳಬೇಕಾಗುತ್ತದೆ. ಇಲ್ಲಿ ಎಲ್ಲ ಚರ್ಚೆಯೂ ಸತ್ಯ, ಕೃತಕ, ಸಹಜ—ಎಂಬ ಮಾತುಗಳಿಗೆ ನಾವು ಕೊಡುವ ಅರ್ಥವನ್ನು ಅವಲಂಬಿಸಿಕೊಂಡಿರುತ್ತದೆ. ಕಾವ್ಯಕಲಾಪ್ರಸಂಗದಲ್ಲಿ ಸತ್ಯವೆಂದರೆ ಬಹಿಃಕ್ರಿಯಾ ಯಾಥಾರ್ಥ್ಯವಲ್ಲ, ಅಂತರ್ಭಾವ ಯಾಥಾರ್ಥ್ಯ. ಕಷ್ಟ ಬಂದದ್ದು ಹರಿಶ್ಚಂದ್ರನಿಗಾದರೂ ಅದನ್ನು ಕಂಡಾಗ ನಮ್ಮ ಕಣ್ಣಿನಲ್ಲೇಕೆ ನೀರು ಸುರಿಯಬೇಕು? ಹರಿಶ್ಚಂದ್ರನು ವಾಸ್ತವವ್ಯಕ್ತಿಯೋ, ಕಲ್ಪಿತವ್ಯಕ್ತಿಯೋ! ಅದು ನಮ್ಮ ವಿಚಾರಣೆಗೆ ಬಾರದೆ, ಅವನ ಪರೀಕ್ಷಾ ಸಮಯದಲ್ಲಿ ಅವನ ಆತ್ಮ ನಮ್ಮ ಆತ್ಮದಲ್ಲಿ

ಹೇಗೋ ಆವಿಷ್ಟವಾಗುತ್ತದೆ. ಅವನು ಹೇಗೆ ಸಂಕಟಪಟ್ಟಿರಬಹುದೆಂದು ನಮ್ಮ ಮನಃಸಂಸ್ಕಾರಾನುಸಾರ ನಮಗೆ ತೋರುತ್ತದೆಯೋ ಆ ಸಂಕಟವನ್ನು ನಾವು ನಮ್ಮಲ್ಲಿ ಪಟ್ಟುಕೊಳ್ಳುತ್ತೇವೆ. ಹೀಗೆ ಒಂದಾನೊಂದು ಮಾನವ ಸನ್ನಿವೇಶದ ಮನೋವೇಧೆಯನ್ನು ನಮಗೆ ಅನುಭವ ಮಾಡಿಸುವ ಕಥಾಕಲ್ಪನೆ ಬಹಿರಂಗ ದೃಷ್ಟಿಯಿಂದ ಕೃತಕವಾದರೂ ಅಂತರಂಗದೃಷ್ಟಿಯಿಂದ ಸಹಜಸದೃಶವಾದದ್ದು. ಚರಿತ್ರಕಾರನ ದೃಷ್ಟಿಗೆ ಅದು ಸತ್ಯವೆನಿಸದಿದ್ದರೂ ರಸೋಪಾಸಕನಿಗೆ ಅದೇ ಪರಮ ಸತ್ಯ. ಹರಿಶ್ಚಂದ್ರನು ವಾಸ್ತವ ಹೌದೋ ಅಲ್ಲವೋ; ಅವನ ಪರೀಕ್ಷಾಸಂಕಟ ಮಾತ್ರ ವಾಸ್ತವ. ಆಗ ನಾವು "ಇಂಥಾ ಮನುಷ್ಯನು ಎಲ್ಲಾದರೂ ಇರುತ್ತಾನೆಯೆ?" ಎಂದು ಸಂದೇಹಪಡುವುದಕ್ಕೆ ನಿಲ್ಲದೆ, "ಇಂಥಾ ಮನುಷ್ಯನ ಹಾಗೆ ಜನ ಇದ್ದರೆ ಎಷ್ಟು ಚೆನ್ನ!" ಎಂದು ಆಶಿಸುತ್ತೇವೆ; "ಅಂಥವನು ನಮ್ಮ ಕಣ್ಣಿಗೆ ಕಾಣಲಿಲ್ಲವಲ್ಲ!" ಎಂದು ಹಂಬಲಿಸುತ್ತೇವೆ. ಹಾಗೆ ಬಾಯಿಬಿಡಿಸುವ ಶಕ್ತಿಯುಳ್ಳ ಕಲ್ಪನೆ ನಮ್ಮ ಪಾಲಿಗೆ ಸತ್ಯ. ಟರ್ನರ್ (Turner) ಎಂಬ ಪ್ರಸಿದ್ಧ ಚಿತ್ರಕಾರನು ಒಂದು ಸೂರ್ಯಾಸ್ತಮಾನದ ಚಿತ್ರಪಟವನ್ನು ತಯಾರುಮಾಡಿಟ್ಟಿದ್ದನಂತೆ. ಅದನ್ನು ನೋಡಿದ ಒಬ್ಬಾಕೆ "ಆಹಾ! ಎಷ್ಟು ಸೊಗಸಾಗಿದೆ! ಆದರೆ ಸಂಜೆಯ ಆಕಾಶ ಹೀಗಿರುವುದು ಎಲ್ಲಿ?" ಎಂದು ಕೇಳಿದಳಂತೆ. ಆಗ ಆ ಚಿತ್ರಕಾರನು "ಎಲ್ಲಾದರೊಂದು ಕಡೆ ಹಾಗಿರಬೇಕೆಂದು ನಿಮಗೆ ಆಶೆಯಾಗಿಲ್ಲವೆ?" ಎಂದು ಉತ್ತರ ಕೊಟ್ಟನಂತೆ. ಆ ಆಶೆ ನಿಜವಾದರೆ ಅಂಥ ಆಶೆಯನ್ನು ಹುಟ್ಟಿಸಿದ ದೃಶ್ಯವೂ ನಿಜ. ಅದೊಂದು ಬಗೆಯ—ಸ್ವಪ್ನದಂಥ—ಪ್ರಾತಿಭಾಸಿಕ ಸತ್ಯ.

ರಚನೆಯಲ್ಲಿ ಕೃತಕವಾಗಿ, ಪರಿಣಾಮದಲ್ಲಿ ಸಹಜಿಕವಾಗಿರುವ ಕೃತಿಗಳು ನಮ್ಮ ರಾಮಾಯಣ ಭಾರತಗಳು. ಸಾವಿರಾರು ವರ್ಷಗಳಿಂದ ಅವು ನಮ್ಮ ಜನಕ್ಕೆ ಸತ್ಯವೆನಿಸಿವೆ. ಆದರೆ ರಾಮನ ಪ್ರಲಾಪವೂ ಭೀಮನ ಪ್ರತಾಪವೂ ಅಲ್ಲಿ ಛಂದೋಬದ್ಧಗಳಾಗಿವೆ. ಪದ್ಯವೇ ಕೃತಕವಲ್ಲವೆ? ನಮ್ಮ ನೆರೆಹೊರೆಯರಲ್ಲಿ ರಾಮಣ್ಣನಿಗೆ ಅಳು ಬಂದಾಗಲೂ ಭೀಮಣ್ಣನು ರೇಗುವಾಗಲೂ ಛಂದಸ್ಸನ್ನೆಣಿಸಿಕೊಂಡು ಮಾತ್ರೆಯ ಲೆಕ್ಕ ಸರಿಬರುವವರೆಗೂ ತುಟಿ ಬಿಗಿದಿರುತ್ತಾರೆಯೆ? ಇವರ ವಾಗ್ವೇಗವನ್ನು ನೋಡಿದರೆ ವಾಲ್ಮೀಕಿ ವ್ಯಾಸರುಗಳ ರಾಮ ಭೀಮರುಗಳನ್ನು ಕೃತಕವೆಂದೇ ಹೇಳಬೇಕಾಗುತ್ತದಲ್ಲವೆ? ಆದರೂ ನಮ್ಮ ಪಾಲಿಗೆ

ಪ್ರತ್ಯಕ್ಷ ರಾಮು ಭೀಮರಿಗಿಂತ ಆ ಪರೋಕ್ಷ ರಾಮು ಭೀಮರೇ ಹೆಚ್ಚು ಸತ್ಯವಾಗಿದ್ದಾರೆ. ಹೀಗೆ ಕೃತಕದಲ್ಲಿ ಎರಡು ಬಗೆ: ಸತ್ಯಾನುಕೂಲವಾದದ್ದೊಂದು, ಸತ್ಯಪ್ರತಿಕೂಲವಾದದ್ದೊಂದು. ಸತ್ಯದ್ಯೋತನೆಗೆ ಅನುಕೂಲವಾಗಿರುವ ಕವಿಕಲ್ಪನೆ ನಮ್ಮ ಸಾಮಾನ್ಯ ಲೋಕಕ್ಕೆ ಕೃತಕವಾದರೂ ಕಾವ್ಯಕಲಾಲೋಕಕ್ಕೆ ಸಹಜವೇ; ಅದೇ ಅಲ್ಲಿ ಸಹಜ.

ಎಲ್ಲ ದೇಶಗಳಲ್ಲಿಯೂ ಕಲಾಪ್ರಪಂಚದಲ್ಲಿ ಮೊದಲು ಗಣ್ಯರಾಗಿದ್ದವರು ಇಬ್ಬರೇ: ಒಂದುಕಡೆ ಮಾಡುವವನು, ಇನ್ನೊಂದುಕಡೆ ನೋಡುವವನು. ಮಾಡಿದ್ದು ನೋಟಕ್ಕೆ ಒಪ್ಪಿತವಾದರೆ ಉಭಯರೂ ಕೃತಾರ್ಥರು. ಈಗ ಹಾಗಿಲ್ಲ. ಅವರ ನಡುವೆ (ನೂರು ವರ್ಷಗಳಿಂದೀಚೆಗೆ ಇಂಗ್ಲಿಷಿನಲ್ಲಿ, ೨೫-೩೦ ವರ್ಷಗಳಿಂದೀಚೆಗೆ ಕನ್ನಡದಲ್ಲಿ) ವಿಮರ್ಶಕನೆಂಬ ಮೂರನೆಯವನೊಬ್ಬನು ಪ್ರಬಲಿಸಿಕೊಂಡಿದ್ದಾನೆ. ಇವನು ಅವರಿಬ್ಬರಿಗೂ ಸ್ನೇಹ ಹೆಚ್ಚಿಸುತ್ತೇನೆಂದು ಬಂದವನು; ಆದರೆ ಎಷ್ಟೋಸಲ ಅದಕ್ಕೆ ಪ್ರತಿಯಾದದ್ದನ್ನೇ ಮಾಡುತ್ತಾನೆ. ತನ್ನನ್ನು ಕೇಳದೆ ಜನ ಮೆಚ್ಚಿಕೊಂಡದ್ದು ಲೆಕ್ಕಕ್ಕೆ ಬರತಕ್ಕದ್ದಲ್ಲ; ಅವರ ಸ್ವತಂತ್ರಾಭಿರುಚಿ ಪ್ರಮಾಣವಲ್ಲ—ಎಂಬೀತೆರದ್ದು ಅವನ ಅಂತರಂಗ ಭಾವನೆ. ಜನ ಎಲ್ಲಿ ನಗಬೇಕೋ, ಎಲ್ಲಿ ಅಳಬೇಕೋ ಅವರಿಗೆ ಗೊತ್ತಿಲ್ಲ; ತಾನು ಹೇಳಿದಂತೆ ಅವರು ರಸ ಕಾಣಬೇಕು. ಅವರ ಸಹಜ ರುಚಿಗಿಂತ ತನ್ನ ಛಿದ್ರಾನ್ವೇಷಣ ಹೆಚ್ಚು ಪ್ರಮಾಣವೆಂಬ ಅಭಿಪ್ರಾಯದ ಆಧಾರದ ಮೇಲೆ ಈ ಅವಾಂತರವರ್ತಿ ಕೆಲಸ ನಡಸುತ್ತಾನೆ. ಅವನು ಗಂಟಲುಳ್ಳವನು; ವೃತ್ತಪತ್ರಿಕೆಗಳು ಅವನಿಗೆ ಅಧೀನ. ಆದದ್ದರಿಂದ ಅವನ ಕೂಗು ದೊಡ್ಡದಾಗಿ, ಕಲಾವ್ಯವಹಾರದಲ್ಲಿ ಸಾಮಾಜಿಕ ವರ್ಗವೆಂಬ ಮೂರನೆಯ ಭಾಗಸ್ಥರೊಬ್ಬರುಂಟೆಂಬುದು ಈಗ ಎಲ್ಲರಿಗೂ ಮರೆತುಹೋದಂತಿದೆ. ವಿಮರ್ಶಕನೆಂಬ ಈ ಪ್ರಬಲ ಮನುಷ್ಯನಿಗೆ ತನ್ನ ಜನದ ಪ್ರಾಚೀನ ಸಾಹಿತ್ಯದ ಪರಿಚಯ ತಕ್ಕಷ್ಟಾಗಿರದೆ ಅದರ ಭಾಷಾಶೈಲಿ ಕಷ್ಟವೆಂದು ತೋರಿದ ಕಾರಣದಿಂದಲೋ, ಆಂಗ್ಲಾದಿ ವಿದೇಶೀಯ ಕೃತಿಗಳ ನಾವೀನ್ಯಾಕರ್ಷಣೆಯಿಂದ ಅವನ ನೈಜಾಭಿರುಚಿ ಶಬಲಿತವಾದದ್ದರಿಂದಲೋ, ಅವನ ಕಿವಿ ಸಂಗೀತಕ್ಕೆ ವಶವಾಗೆನೆಂದು ಸ್ವಾತಂತ್ರ್ಯಪ್ರತಿಜ್ಞೆ ತೊಟ್ಟದ್ದರಿಂದಲೋ, ಅವನಿಗೆ ಸ್ವೋಪಜ್ಞತೆಯಲ್ಲಿದ್ದ ವಿಶ್ವಾಸಾತಿರೇಕದಿಂದಲೋ—ಏಕೋ, ಹೇಗೋ—ಅವನ ಮನಸ್ಸಿಗೆ ಪೂರ್ವ

ಸಂಪ್ರದಾಯ ಬೇಡವೆನ್ನಿಸಿತು. ಅಂಥವರ ಪ್ರಭಾವದಿಂದ ಮಾರ್ಪಟ್ಟಿರುವುದು ನಮ್ಮ ಇಂದಿನ ಕನ್ನಡ ವಾಚಕ-ಪ್ರೇಕ್ಷಕರ ನಾಟಕಾಭಿರುಚಿ. ಹೀಗಾಗಿ, ಹಿಂದಿನ ಪದ್ಯಗೀತ ಮಿಶ್ರಿತವಾದ ನಾಟಕಪ್ರಬಂಧಕ್ಕೆ ಈಗ ಪುರಸ್ಕಾರವಿಲ್ಲದೆ ಹೋಗಿದೆ. ಅಂಥ ಪ್ರಬಂಧವನ್ನು ಬರೆಯುವವರು ಈಗ ಒಬ್ಬರಿಬ್ಬರು ಮಾತ್ರ ಉಳಿದಿದ್ದಾರೆ. ಅಧಿಕಾರ ಪ್ರತಿಷ್ಠೆಗಳಲ್ಲಿರುವವರ ಕೃಪಾದೃಷ್ಟಿ ಅವರ ಪಾಲಿಗೆ ಇಲ್ಲವಾಗಿದೆ.

ವಿಮರ್ಶನಕಾರನು ಅನವಶ್ಯ ವ್ಯಕ್ತಿಯೆಂದಾಗಲಿ ಅವನಿಂದ ಪ್ರಯೋಜನ ವಾಗದೆಂದಾಗಲಿ ನಾನು ಹೇಳುತ್ತಿಲ್ಲ. ವಿಮರ್ಶಕನು ಚಿರಕಾಲದ ಜನಾಭಿ ರುಚಿಯನ್ನು ತನ್ನ ಕಾರ್ಯಕ್ಕೆ ಆಧಾರಭೂಮಿಯನ್ನಾಗಿ ಇರಿಸಿಕೊಂಡರೆ ಆಗ ಅವನ ಕಾರ್ಯ ಉಪಕಾರಕವಾಗಬಲ್ಲದು. ತನ್ನ ಸ್ವತಂತ್ರ ಸಾಹಸಗಳಲ್ಲಿ ಅವನು ಪೂರ್ವಸಂಪ್ರದಾಯಕ್ಕೆ ಸಲ್ಲಬೇಕಾದ ಗೌರವವನ್ನು ಮರೆಯಬಾರದು. ಆ ಸಂಪ್ರದಾಯದಿಂದ ಪೋಷಿತವಾಗಿ ಸಂಸ್ಕೃತವಾದದ್ದು ನಮ್ಮ ವಾಚಕರ ಮನಸ್ಸು. ಮತ್ತು ಪ್ರಬಂಧ ಲೇಖಕನು ಯಾರಿಗಾಗಿ ಲಿಖಿಸಿದ್ದಾನೆ,—ಎಂಥ ವಾಚಕ ಪ್ರೇಕ್ಷಕರನ್ನು ಉದ್ದೇಶಿಸಿದ್ದಾನೆ,—ಎಂಬುದೂ ವಿಮರ್ಶಕನ ದೃಷ್ಟಿಯಲ್ಲಿರಬೇಕಾದ ಸಂಗತಿ. ಕಲ್ಲಯ್ಯನಿಗಾಗಿ ಬರೆದದ್ದನ್ನು ಮಣ್ಣಯ್ಯನ ಕಣ್ಣಿನಿಂದ ನೋಡಿದರೆ ಕೃತಿಗೆ ನ್ಯಾಯ ತಪ್ಪೀತು. ವಿಮರ್ಶಕನು ಪ್ರಬಂಧ ಕರ್ತನ ದೃಷ್ಟಿಕ್ಷೇತ್ರದಲ್ಲಿದ್ದ ಸಾಮಾಜಿಕರಲ್ಲೊಬ್ಬನಾಗಬೇಕು. ಅವನೆದೆಯಲ್ಲಿ ಅಹಂಭಾವವಣಗಿಹೋಗಿ, ಉದ್ದಿಷ್ಟಜನ ಸ್ನೇಹವುಕ್ಕಿ, ಅವನ ಲೇಖಣಿಯಿಂದ ಸ್ವಂತ ಚಮತ್ಕಾರಪ್ರದರ್ಶನಕ್ಕೆ ಬದಲಾಗಿ ಕನಿಸಹಾನುಭೂತಿ ಹರಿದುಬಂದರೆ ಆಗ ಅವನ ವಿಮರ್ಶೆ ಉಪಕಾರಕವಾದೀತು. ನಮ್ಮ ಪ್ರಾಚೀನ ಪ್ರಬಂಧಗಳು ಅಪೇಕ್ಷಿಸುವುದು ಅಂಥ ವಿಮರ್ಶಕನನ್ನ. ಸಹಾನುಭೂತಿ ಬೇಕಾದದ್ದು ನಮ್ಮ ನೂತನರಿಗೆ ಮಾತ್ರವೇ ಅಲ್ಲ; ನಮ್ಮ ಪುರಾತನರೂ ಅದನ್ನು ಬೇಡಿಕೊಳ್ಳ ಬೇಕಾಗಿದೆ.

ನಾನು ಹಿಂದಿನ ಕಾಲದವನು. "ಬಾಹುಬಲಿ ವಿಜಯ"ದ ಪ್ರದರ್ಶನದಲ್ಲಿ ಪದ್ಯವೂ ಸಂಗೀತವೂ ಅಭಿನಯದೊಡನೆ ಸೇರಿಕೊಂಡದ್ದು ನನಗೆ ರುಚಿಸಿತು. ನನ್ನಂಥ ಹಳೆಯ ಕಂದಾಚಾರದವರು ಇನ್ನೂ ಕೆಲ ಮಂದಿ ಆ ಸಭೆಯಲ್ಲಿದ್ದ ರೆಂದು ನಾನು ತಿಳಿದುಕೊಂಡಿದ್ದೇನೆ. ಅಂಥವರು ದೇಶದಲ್ಲಿ ಎದುವರೆಗೂ

ಇರುತ್ತಾರೋ ಅದುವರೆಗೂ ಗದ್ಯ ಪದ್ಯ ಸಂಗೀತ ಸಹಿತವಾದ ನಾಟಕಕ್ಕೂ ನಮ್ಮ ಸಮಾಜದ ಸಂಸ್ಕೃತಿಜೀವನದಲ್ಲಿ ಒಂದು ಸ್ಥಾನವಿರುತ್ತದೆಂದು ಧಾರಾಳವಾಗಿ ಹೇಳಬಹುದು. ಶ್ರೀ ರಾಜರತ್ನಂ ಅವರು ಹೊಸ ಸಂಪ್ರದಾಯದಲ್ಲಿ ಬೆಳೆದವರೂ ಹೊಸ ಸಂಪ್ರದಾಯವನ್ನು ಮುನ್ನಡಸುತ್ತಿರುವವರೂ ಆಗಿದ್ದರೂ, ಅವರು ಹಳೆಯ ಸಂಪ್ರದಾಯದ ವಿಷಯದಲ್ಲಿ ವಿಮುಖರಾಗದೆ ವಿಶ್ವಾಸಿಗಳಾಗಿರುವುದು ಅವರ ಸಾಹಿತ್ಯದೃಷ್ಟಿಯ ವಿಶಾಲತೆಗೆ ನಿದರ್ಶನವಾಗಿದೆ. ಸಾಹಿತ್ಯದಲ್ಲಿ ಇದು ಹೊಸದು, ಇದು ಹಳೆಯದು ಎಂಬ ವಿವೇಚನೆ ಚರಿತ್ರಕಾರನಿಗೆ ತಕ್ಕದ್ದೇ ಹೊರತು ರಸಾಭಿಮಾನಿಗೆ ಬೇಕಾದದ್ದಲ್ಲ. ರಸದೃಷ್ಟಿಯಿಂದ ಕಾವ್ಯಕ್ಕೆ ಬೆಲೆ ಕಟ್ಟುವವನಿಗೆ ಕಾಲದ ಪ್ರಶ್ನೆ ಅಪ್ರಕೃತ. ಹಾಗೆಯೇ ಕವಿಯ ವಾಕ್ಯವಿಧಾನದ ಪ್ರಶ್ನೆಯೂ ಅಪ್ರಕೃತ. ಕವಿಯು ಮಾತನ್ನು ಹೇಗೆ ಜೋಡಿಸಿದ್ದರೆ ಏನು, ಅದರಿಂದ ಭಾವಸ್ಫೂರ್ತಿಯಾಯಿತೆ, ರಸಾನುಭವವಾಯಿತೆ? ಎಂಬುದಷ್ಟೇ ಪ್ರಶ್ನೆ. ಕಾವ್ಯ ಹೊಸದಾದರೂ ಮನುಷ್ಯಹೃದಯ ಹಳೆಯದು. ಕಥೆ ನೂತನವಾದರೂ ಕುತೂಹಲಿಯ ಮನಸ್ಸಂಸ್ಕಾರ ಪುರಾತನವಾದದ್ದು. ಆದದ್ದರಿಂದ ರಸಪರಿಪಾಕಕ್ಕೆ ಕವಿ ಎಂಥೆಂಥ ಪಾತ್ರ ಪರಿಕರಗಳನ್ನು ಉಪಯೋಗಿಸಿಕೊಂಡಿದ್ದಾನೆ ಎಂಬುದು ನಮಗೆ ಗೌಣವಾದ ಪ್ರಶ್ನೆ. ಮುಖ್ಯ ಪ್ರಶ್ನೆ—ಪಾಕಕ್ರಮ ಯಾವುದೇ ಆಗಿರಲಿ, ರಸ ಆಸ್ವಾದ್ಯವಾಗಿದೆಯೆ? ಎಂಬುದು. ಹಳೆಯ ಗದ್ಯ ಪದ್ಯಗಳಿಂದ ಹಾಗೆ ರಸವನ್ನಿಳಿಸುವುದು ಸಾಧ್ಯವೆಂಬುದನ್ನು ಶ್ರೀ ರಾಜರತ್ನಂ ಅವರು ತೋರಿಸಿದ್ದಾರೆ.

ಎಲ್ಲ ಕಲೆಯ ವಿಷಯವೂ ಹೃದಯ ಭಾವ. ನಮ್ಮ ಅಂತರಂಗದಲ್ಲಿರುವುದನ್ನು ಎಬ್ಬಿಸಿ ಬಹಿರ್ಮುಖಮಾಡಿಸುವುದು ಕಾವ್ಯದ, ಚಿತ್ರದ, ಗಾನದ, ಅಭಿನಯದ ಕೆಲಸ. ಹೃದಯಭಾವವನ್ನು ಬಾಹ್ಯದಲ್ಲಿ ರೂಪಗೊಳಿಸಲು ನಮ್ಮ ಸಾಮಾನ್ಯ ಭಾಷೆಯ ಸಾಧನ ಸಾಲದು. ಆ ಭಾಷೆಯ ಒಂದು ವಿಶೇಷ ಶಬ್ದವೈಚಿತ್ರ್ಯವೂ ಎಷ್ಟೋ ಸಂದರ್ಭಗಳಲ್ಲಿ ಸಾಕಾಗದೆ ಹೋಗುತ್ತದೆ. ಆಗ ಅದಕ್ಕೆ ಛಂದಸ್ಸಿನ ಸಹಾಯವೂ ಕಂಠಧ್ವನಿಯ ತರಂಗಚಲನೆಯ ಉಪೋದ್ಬಲವೂ ಬೇಕಾಗುತ್ತವೆ. ಆ ಹೃದಯ ಭಾವ ಮತ್ತಷ್ಟು ಚೆನ್ನಾಗಿ ವಿಕಾಸವಾಗಲು ಅಂಗಾಂಗಗಳ ಅಭಿನಯವೂ ಸಹಕಾರಿಯಾಗುತ್ತದೆ. ಹೀಗೆ ವಾಚನ, ಗಾನ, ನಟನ—ಈ ಮೂರೂ ಹೃದಯಾಭಿವ್ಯಕ್ತಿಗೆ ಅವಶ್ಯವಾದ ಸಾಧನಗಳು. ಅವು

# ಪುಸ್ತಕದ ಒಳಪಿಡಿ

## ಪಾತ್ರಂಗಳ್

ಸೂತ್ರಧಾರನ್

ಭರತನ್

ದೂತನ್

ಗಣಬದ್ಧದೇವರ್

ಪುರೋಹಿತನ್

ದೌವಾರಿಕನ್

ಸಂಧಿವಿಗ್ರಹಿ

ಬಾಹುಬಲಿ

ಮಂತ್ರಿ ೧

ಮಂತ್ರಿ ೨

ಖೇಚರಿ ೧

ಖೇಚರಿ ೨

ನೇಪಥ್ಯಗಾಯಕರ್

# ಶ್ರೀ ಬಾಹುಬಲಿ ವಿಜಯಂ

---

## ಪ್ರಸ್ತಾವನೆ

**ಸೂತ್ರಧಾರನ್**

ಶ್ರೀ ವೃಷಭಸೇನ ಜಿನೇಂದ್ರಾದಿ ಮ-
ಹಾವೀರ ಜಿನಾಂತರಾದ ಜಿನಪತಿಗಳ್ ಭ-
ವ್ಯಾವಳಿಗೆ ಚತುರ್ವಿಂಶತಿ-
ದೇವರ್ ದಯೆಗೆಯ್ಗೆ ವಿಮಲ ರತ್ನತ್ರಯಮಂ

ಶ್ರೀ ದೇವೇಂದ್ರಮುನೀಂದ್ರವಂದಿತಗುಣವ್ರಾತಂ ಜಗತ್ಸ್ವಾಮಿ ಸಂ-
ದಾದಿಬ್ರಹ್ಮನಗಾಧಬೋಧನಿಳಯಂ ದುರ್ವಾರಸಂಸಾರವಿ-
ಚ್ಛೇದೋಪಾಯನಿಯುಕ್ತಸೂಕ್ತಿ ವೃಷಮಾರ್ಗಾಗ್ರೇಸರಂ ಪಾಪಹೃತ್-
ಪಾದಾಬ್ಜಂ ದಯೆಗೆಯ್ವನಕ್ಕೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ

ಶ್ರೀ ಗೊಮ್ಮಟಜಿನನಂ ನರ-
ನಾಗಾಮರ ದಿತಿಜ ಖಚರಪತಿ ಪೂಜಿತನಂ
ಯೋಗಾಗ್ನಿ ಹತಸ್ಮರನಂ
ಯೋಗಿಧ್ಯೇಯನನಮೇಯನಂ ಸ್ತುತಿಯಿಸುವೆಂ

ಕ್ರಮದಿಂ ಮೆಯ್ಪೊಣರ್ದಾಜಿದಕ್ರಮದೆ ಮಾತಂ ಬಿಟ್ಟು ತನ್ನಿಟ್ಟ ಚ-
ಕ್ರಮದುಂ ನಿಃಪ್ರಭಮಾಗೆ ಸಿಗ್ಗನೊಳಕೊಂಡಾತ್ಮಾಗ್ರಜಂಗೊಳ್ಪುಗೆ-
ಯ್ದು ಮಹೀರಾಜ್ಯಮನಿತ್ತು ಪೋಗಿ ತಪದಿಂ ಕರ್ಮಾರಿವಿಧ್ವಂಸಿಯಾ-
ದ ಮಹಾತ್ಮಂ ಪುರುಸೂನು ಬಾಹುಬಲಿಪೊಲ್ ಮತ್ತಾರೊ ಮಾನೋನ್ನತರ್

ಆರ್ಯಮಿಶ್ರರೊಳ್ ವಿಜ್ಞಾಪಸಂ . . .

[ನೇಪಥ್ಯದೊಳ್ ಪಲವುಂ ಪಱೆಯ ರವಂಗಳ್.

ಏನಿದೀ ಪಱೆಗಳ ರಾವಂ? (ಆಲಿಸಿ) ಓ, ಅಱಿಯಲ್ಬಾದತ್ತು!

ಅಱುವತ್ತು ಸಾಸಿರಂಗಳ್
ನೆಱೆದುವು ಬರಿಸಂಗಳೆಂದು ದಿಗ್ವಿಜಯದೊಳ-
ಟ್ಕಿಱಿನೊಳಯೋಧ್ಯೆಗೆ ವೊಗಸಿದ-
ನಱಿಕೆಯ ಪಱೆ ಪಲವುಮೆಸೆಯೆ ಭರತಮಹೀಶಂ

ಅಹೋ, ಚಕ್ರರತ್ನಸಂಪದಮೆ!

ಹತವೈರಿಕ್ಷತ್ರಚಕ್ರಂ ಭಯಚಕಿತಜಗದ್ವೀರಚಕ್ರಂ ವಿನಮ್ರ-
ಕ್ಷಿತಿಚಕ್ರಂ ದೀಪದೀಪ್ತಿಪ್ರತಿಹತದಿನಕೃಚ್ಚಕ್ರತೀವ್ರಾಂಶುಚಕ್ರಂ
ಜಿತದಿಕ್ಚಕ್ರಂ ಪ್ರಭಾಪ್ರಜ್ವಳಿತದಶದಿಶಾಚಕ್ರಮುಗ್ರಪ್ರತಾಪೋ-
ರ್ಜಿತತೇಜಶ್ಚಕ್ರಂ . . .

(ನೇಪಥ್ಯದೊಳ್ ಹಾಹಾಕಾರಂ)

. . . ಇರ್ದತ್ತೊಳಪುಗದೆ ಪುರೋಪಾಂತದೊಳ್ ಚಕ್ರಿಚಕ್ರಂ

[ ಇದು ಪ್ರಸ್ತಾವನೆ ]

## ಮೊದಲನೆಯ ಪ್ರವೇಶಂ

[ಚಕ್ರಂ, ಭರತನ್, ಪುರೋಹಿತನ್, ದೂತನ್, ಗಣಬದ್ಧದೇವರ್.]

**ಭರತನ್**

(ವಿಸ್ಮಯದಿಂ) ಏನಾಯ್ತು ದೂತ?

**ದೂತನ್**

(ಸಸಂಭ್ರಮಂ) ಚಕ್ರಂ . . . ಚಕ್ರೇಶ್ವರಾ!

**ಭರತನ್**

(ಬದ್ಧಭ್ರುಕುಟಿಯಾಗಿ) ಚಕ್ರಂ?

**ದೂತನ್**

ಒಳಪುಗದೆ ಪುರೋಪಾಂತದೊಳ್ ನಿಂದತ್ತು . . . ಚಕ್ರಂ!

**ಭರತನ್**

ಚಕ್ರಮಂ ರಕ್ಷಿಸುವ ಗಣಬದ್ಧದೇವರ್ಕಳ್ ಎಲ್ಲಿದರ್?

**ಗಣಬದ್ಧ ದೇವರ್**

ಜಯಜಯಾ ಚಕ್ರೇಶ್ವರಾ!
ಪುರಗೋಪುರದೊಳಗಂ ಚಕ್ರರತ್ನಮಿಂತೇಕೆ ಪುಗದೆ ಮಾಣ್ದಿರ್ದುದೊ?
ಮಚ್ಚರಿಪಧಟನನ್ನನಾವನೊ ಭರತೇಶ್ವರ ಚಕ್ರವರ್ತಿಗಿನ್ನುಂ ಜಗದೊಳ್?
ಅವಂಗೆ ಕಾಲಚಕ್ರಮನೋವದೆ ಮಾಡಲ್ಕೆ ಚಕ್ರಮಿದು ಬಗೆದುದೊ?
ಶೌರ್ಯೋರ್ಜಿತವಿಭೂತಿದವಾನಸಳನಾವನ ಚತುರಂಗಬಲಮನಿಂ ಸುಟ್ಟಪುದೊ?
ಆತಂಗೆ ಚಕ್ರಿವೇಟ್ಕುಮೆ?
ಪೋ! ತಳ್ತಿಱಿದಾಮೆ ಗೆಲ್ವಂ!

[ಎಂದು ತಮುತಮಗೆ ಅಸಿಬರುಂ ಉತ್ಪಾತಮರುದಾಭಿಘಾತೋದ್ಧೂತ-ಪಯೋನಿಧಿಗಳಂತೆ ಮಸಗುವರ್.]

**ಭರತನ್**

ನಿಲ್ಲಿಂ. ಸಾಲ್ಗುಂ ನಿಮ್ಮೀ ಸಾಹಸಂ.
ಚಕ್ರರತ್ನಂ ಅಯೋಧ್ಯಾಪುರಮಂ ಪುಗದೆ ತಱುಂಬಿ ನಿಂದತ್ತು!

ಇದು ದಲ್ ಚೋದ್ಯಮತರ್ಕ್ಯಮಸಂಭಾವ್ಯಂ!
ಅಸ್ಖಳಿತಗತಿಯುಪ್ಪ ಚಕ್ರರತ್ನದ ಸ್ಖಳನಕ್ಕೆ ಕಾರಣಮಾವುದೊ?
[ಎಂದು ಮನಃಸ್ಖಳನಮಾಗೆ ವಿಸ್ಮಯಂಬಟ್ಟು, ಪುರೋಹಿತರತ್ನಮಂ ಬರಿಸಿ]
ಹೇ ಪುರೋಹಿತ ರತ್ನ!
ಪದಿನಾಲ್ಕುಂ ರತ್ನಕ್ಕಂ ಮೊದಲೆನಗೀ ಚಕ್ರರತ್ನಂ;
ಇದಱಿಂ ಮೇಲಾವುದು ದೈವಮೆನಗೆ?
ಅಯೋಧ್ಯೆಯನಿದು ಪುಗದೆ ತಱುಂಬಿನಿಂದ ಕಾರಣಮೇನೊ?
ಆಪೂರ್ವದಕ್ಷಿಣಾಪರಕೂಪಾರದ ರಜತಗಿರಿಗುಹಾದ್ವಯದೆಡೆಯೊಳ್
ಪೋಪಂದುಮಣಮೆ ತೊಡಱದುದು—
ಈ ಪುರಗೋಪುರದೊಳೇಕೆ ತೊಡರ್ದುದೊ ಚಕ್ರಂ?
[ಎಂದು ವೀರರಸೋದಾರಗಂಭೀರವಚನರಚನೆಗಳಿಂ]
ಎನಗಮರಾತಿಗಳೊಳರ್—ಎಂಬಿನಿತು ಪರಾಭವಮಂ
ಈಗಳೀ ಚಕ್ರಂ ಸೂಚನೆಗೈದುದು!
ಅನ್ನನಾವಂ ತನಗಿರಲೆಡೆಮಾಡಿದಪ್ಪನಂತಕಮುಖಮಂ?

### ಪುರೋಹಿತನ್

(ಭರತಂಗೆ ಅಭಿಮುಖನಾಗಿ)

ದೇವ, ನೀನಾದಿರಾಜನೈ.
ನಿನಗಾ ನಾಲ್ಕುಂ ರಾಜವಿದ್ಯೆ ಪುಟ್ಟಿದುದಱಿಂ ನೀನೆ ಬೆಸಸುವುದು ನಯಮಂ.
ಅದೇನೆಂದೆಮ್ಮಂದಿಗರ್ ಜಡರ್ ಬಿನ್ನವಿಪರ್?
ಫಳದಿಂ ಕಲ್ಪದ್ರುಮಮಂ ಜಳದಿಂ ಜಳನಿಧಿಯಂ
ಉಕ್ತಿಯಿಂ ಸುರಗುರುವಂ ಬೆಳಗಿಂ ದಿನಪನಂ
ಅರ್ಚಿಪ ಜಡಮತಿಗಳ ತೆಱನನಾಮುಮನುಕರಿಸಿರೆವೇ!
ನಿನ್ನಯ ಮಾಡಿದ ಗೌರವದುನ್ನತಿ ನುಡಿಯಿಸುವುದೆನ್ನನ್-
ಅದಱಿಂ ಕಿಱಿದಂ ಬಿನ್ನವಿಸಿದಪೆಂ:
ಜೈತ್ರಾಸ್ತ್ರಂ ನಿನಗೀ ಚಕ್ರರತ್ನದಿಂ ಪೆಱತುಂಟೆ?
ಇದು—ಪಗೆವರುಳ್ಳುದಂ ತೋಱಿದಪುದು ನಿನಗೆ.
ಅರಿನೃಪರ್ಕಳಿಲ್ಲದಿದಿಂತಿರ್ಪುದೆ ದುರ್ನಿರೀಕ್ಷ್ಯಂ—

ಇನಬಿಂಬದಂತೆ ಪಜ್ಜಳಿಸಿ ಬಾಗಿಲೊಳ್ ಪುರವರದಾ.
ದ್ವಾದಶರಾಜಕಮೆಂಬುದನ್
ಓದುಗಳೊಳ್ ಕೇಳಲಾದುದಲ್ಲದೆ ಕಾಣಲ್ಕಾದುದೆ—
ಲವಣೋದಧಿವೃತಮೇದಿನಿಯೊಳ್ ದೇವ ನಿನ್ನ ಪೆಸರೆಸೆವೆಡೆಯೊಳ್?
ನಿನಗರಸ,
ಬಹಿರ್ಮಂಡಳಮನೆ ಸಮಜಲ್ಸಿನಿತು ಬರಿಸಮುಂ ಪೋದುವು;
ಕೇಳ್, ಇನಿಸಂತರ್ಮಂಡಲಸಾಧನಮುಂಟೆಂದಱಿಪಿದುದುಮಂ
ಇನ್ನಱಿಪುವೆನೆ?

**ಭರತನ್**

ಎನ್ನೀ ಅನ್ವಯರಾಜಧಾನಿಯೊಳ್ ಅಂತಪ್ಪವರಾರ್? ಅರಿನೃಪರ್?

**ಪುರೋಹಿತನ್**

ಪುರುತನಯನ್ ತಾನ್, ಆನುಂ ಪುರುತನಯರೆಂ;
ಎಮಗೆ ತಂದೆಯಿತ್ತವನಿತಳಂ ಪೊರೆಯುಂಟೆ ತನಗೆ?
ಭಾಗ್ಯಾನುರೂಪದಿಂ ಬಾಳ್ವೆನೆಱಗೆನೆಂಬತಿಮದದಿಂ—
ದೇವ!
ನಿನ್ನನುಜರನಿಬರುಂ ಮಾನೋನ್ನತರ್! ಅಣಮೆಱಗರ್!
ಅವರೊಳಗ್ಗಳದದಟಂ
ತನ್ನಭಿಮಾನದ ಭುಜಬಲದುನ್ನತಿಯನೆ ಮೆಱೆವ ಬಾಹುಬಲಿ
ಮುನ್ನೆಱಗಂ!
ಆದಿಬ್ರಹ್ಮರ ಕೊಟ್ಟೀಮೇದಿನಿಗಾನೊಡೆಯನ್ ಆತನರಸು
ಇನಿವಿರಿದಿಂದಾದೊಡಮೇನೆನಗೆ—
ಎಂಬ ಮದೋದಯದೊಳ್, ದೇವ, ಬಾಹುಬಲಿ ಬಲ್ದಿರ್ದಂ.

**ಭರತನ್**

[ಬಳೆದ ಮುನಿಸಿನೊಳ್ ಕೆಚ್ಚನಾದ ಕಣ್ ದೆಸೆಗೆ ಕೆಂಪನೊದವಿಸೆ, ಬಳೆದ ಮುನಿಸೆ ದಿಗ್ವನಿತೆಯರ್ಗೆ ರಕ್ತಬಲಿಯಂ ಮನಕ್ಕೈವರೆ ಕುಡುವಂತಾಗೆ]

ಏನ್! ಏನೋ!
ಮದನುಜರೆನಗಾನತರಣಮಾಗದಿರ್ದರ್?

ಆ ಮದಮುವರ್ಗೇನೇತಱಿೊಳಾದುದು?
ಇನಿಸಾನುಂ ಬೇಗದೊಳೆ ಕಳೆದು ತೋಱಿನೆ ರಣದೊಳ್!

ಪುರೋಹಿತನ್

ಭರತೇಶ್ವರ,
ರಾಜವತಿಯಕ್ಕುಮಲ್ಲದೆ ರಾಜನ್ವತಿಯಾಗದಲ್ತೆ ಧರೆ
ಮತ್ತೊರ್ವಂ ತೇಜಸ್ವಿ ಪೊಡರ್ವೊಡೆ?
ಅದಱಿಂ ರಾಜನ್ವತಿ ಮಾಡು ಧರಣಿಯಂ ಧರಣಿಪತೀ.
ಅದೆಂತೆನ್ನ—
ನಿನ್ನ ಪದಾಂಬುರುಹಕ್ಕವರೆಱಗಿ ಸುಖಮನನುಭವಿಸುಗೆ ಮೇಣ್!
ಪುರುಪರಮೇಶ್ವರನ ಪದಾಂಬುರುಹಕ್ಕವರೆಱಗಿ ತಪಮನನುಭವಿಸುಗೆ ಮೇಣ್!
ಬಗೆಯೊಳಗೆ ಬಳೆದ ಭೀತಿಯೆ ಮಿಗೆ
ಭವದಾಸ್ಥಾನಭೂಮಿಯಂ ಪುಗುಗೆ!
ವನಂಬುಗುಗೆ ಅಲ್ಲದಂದು!
ಪೆಱತೆಡೆ ಪುಗುವೆಡೆಯಿಲ್ಲವರ್ಗೆ!
ಬೆಸಸು ಶಾಸನಹರರಂ!

ಭರತನ್

[ವಿಕಸಿತನಾಸಾಪುಟನುಂ ಅತಿವಿಕಂಪಿತಾತಾಮ್ರದಶನವಸನನುಂ
ಬದ್ಧಭ್ರುಕುಟಿಪುಟನುಮಾಗಿ]

ದೂತ! ಪೋ ಪೋಗು!
ಅನುಜರವರೆನ್ನವರ್ಗಿಂತೆಂದು ಪೇೞ್:
ಎನಗೊರ್ವಂಗುಪಭೋಗ್ಯಮಲ್ತು ವಸುಧಾಸಾಮ್ರಾಜ್ಯಂ;
ಓರಂತೆ ನಿಮ್ಮನಿಬರ್ಗಂ!
ಪಿರಿಯಣ್ಣನೇಂ ಜನಕನೇನೆಂಬೊಂದು ಕೊಂಡಾಟದಿಂ ವಿನಯಂ ಸಾಲ್ವುದು.
ತಾಮುಮಾಮುಮೊಡನಿರ್ಪಂ ಬರ್ಪುದು—
ಎಂಬೀಶಶಾಸನಮಂ ನೆತ್ತಿಯೊಳಾಂತು
ಬನ್ನಿಮೆಱಗಿಂ ಚಕ್ರೇಶಪಾದಾಬ್ಜದೊಳ್—ಎಂದಱಿಪು ಪೋ.

(ದೂತನ್ ಪೋಪನ್.)

(ಭರತನ್ ಶತಪಥನ್ನಡೆದು)

ಎನಿಬರರಸುಗಳುಮೆಱಗಿದೊಡೆನಗೇವಂದಪುದೊ—
ಬಾಹುಬಲಿ ಪೊಱಗೆನೆ!
ಪೇೞಿ, ಇನಿತುಂ ಪುರಮೇವುದೊ—
ಪೌದನಪುರಮೆನ್ನಾಳ್ಕೆಗಿಂತು ಪೊಱಗೆನಿಪಾಗಳ್!

### ಪುರೋಹಿತನ್

ಆ ಬಾಹುಬಲಿ, ಭರತೇಶ್ವರ, ನಿನಗೇನಂ ಪೇೞ್ವೆಂ!
ಆತನ್
ಸುಭಟಸಮರಸಂಘಟ್ಟದೋರ್ಗರ್ವವಿಧ್ವಂಸನಕೇಳೀದೋಹಳಂ!
ವಿದ್ವಿಷದಿಭರದನಸ್ತಂಭಲೀಲಾಸಮುತ್ಪಾಟನಕಾಂಕ್ಷಾದುರ್ಮದಂ!
ದುರ್ಜಯರಿಪುನೃಪಶೌರ್ಯೋನ್ನಮನ್ಮಸ್ತಕಾವರ್ಜನವಾಂಛಾದುರ್ಧರಂ!
ದುರ್ಲಲಿತಚರಿತಸಂಕೇತಗೋಷ್ಠೀನಿಕೇತಂ!

### ಭರತನ್

[ಅಕಾಲಯಮರಾಜಲೀಲೆಯಂ ಕೈಕೊಂಡು]

ಏವನೆಮಗೆಂಬ ಶೌರ್ಯಮುದಾವಷ್ಟಂಭದೊಳ್
ಅವಂದಿರಿಂತುಱದಿರೆ—ಪೇೞಾವುದೊ—
ಬಾಯ್ಕೇಳಿಸಿಯುಂ ಪೇೞೇವುದೊ—
ಷಟ್ಖಂಡಮಂಡಿತಂ ಭೂವಳಯಂ?
ವೀರಭಟರ್ ಉದ್ಭಟರ್ ಆರಭಟೀರಸರ್
ಅವರಿವರಡೆನ್ನರುಂ ಸೆಣಸುವೊಡೇಕಾರಣಮೊ?
ಚಕ್ರಮೇವುದೊ? ವಾರಣಘಟೆ ದಂಡರತ್ನಮೇಗೆಯ್ವುದೊ?

### ಪುರೋಹಿತನ್

ಸಿನತೊಂದೋಲೆಗೆ ತೀರ್ವುದೊಂದು ಮನೆವಾರ್ತೆಗೆ
ಇದೇನೆಂದರಸ ಬಳಿಯೆ ನುಡಿದಪೆ?
(ಅವಲೋಕಿಸಿ)
ಇತ್ತಲಿದೊ ಬಂದನಲ್ತೆ ಶಾಸನಹಾರಿ!

### ದೂತನ್

ಬಿನ್ನಪಂ, ಜೈತ್ರಾಸ್ತ್ರ!
ಪುರುಪರಮೇಶ್ವರ ತನೂಜರ್ ನಿನ್ನ ರಾಜಾದೇಶಮನವಧಾರಿಸಿದರ್.
ಪೇಳ್ದಿರವರ್:
ಪಿರಿಯಣ್ಣಂ ಗುರು ತಂದೆಯೆಂದೆಱಗುವಂ ಮುನ್ನೆಲ್ಲಂ;
ಇಂತೀಗಳಾಳರಸೆಂಬೊಂದು ವಿಭೇದಮಾದೊಡೆ
ಎಱಕಂ ಛೀ ಕಷ್ಟಮಲ್ತೇ!
ವಸುಂಧರೆಗೆ, ಅಯ್ಯಂ ದಯೆಗೆಯ್ಯೆ ಮುಂ ಪಡೆದುದರ್ಕೆ,
ಇಂತೀತನೊಳ್ ತೊಟ್ಟ ಕಿಂಕರಭಾವಂ—
ನಮಗಕ್ಕಿಗೊಟ್ಟು ಮಡಗೂಱುಣ್ಬಂದಮಂ ಪೋಲದೇ?
—ಎಂದು ತಮ್ಮೊಳನಿಬರುಂ ಪರಿಚ್ಛೇದಿಸಿ ಮತ್ತಮೆಂಬರ್:
ಕುಳಿಶಾಸ್ತ್ರೋತ್ತಂಸಿತಪದನಳಿನಂಗೆ ತನೂಜರಾಗಿ
ಪುರುಷಾರ್ಥಮನುಜ್ಜ್ವಳಿಸದೆ ಮಾಣ್ಬುಮೆ?
ನಮಗಿದು ಪಳಾಳಭಾರಂಬೊಲೀ ಮಹೀತಳಭಾರಂ!
—ಎಂದು ಪರಿತ್ಯಕ್ತನಿಜರಾಜ್ಯಪರಿಚ್ಛೇದರಾಗಿ
ಕುಮಾರರ್ ನೂರ್ವರುಮೊಳಪೊಕ್ಕರ್ ಸಮವಸರಣಭೂಮಂಡಲಮಂ!

### ಭರತನ್

ತಪೋನಿರತರಾದರ್ ಗಡ ನೂರ್ವರುಂ!

### ದೂತನ್

ಆದರ್ ಗಡ!
ಪುರುದೇವಂ ಕುಡೆ ಪಡೆದೆವಿಳಾತಳಮಂ.
ಒಡನೆ ಪುಟ್ಟಿದ ಮೇಳಕ್ಕೆ ಅಡಿಗೆಱಗಿಮೆಂದು ಭರತಂ ಜಡಿವಂ.
ಪರಮಂಗೆಱಗಿದವರ್ ಪೆಱರ್ಗೆಱಗುವೆವೇ?
ಜಿನಪಾದಕಮಳರಜದಿಂ ಪವಿತ್ರಮಾದೆಮ್ಮ ಮಕುಟಮೆಱಗದು ಪೆಱರ್ಗಂ!
ಭರತನನೆಮಗವಯವದೆಱಗಿಸುವ ತಪಮನೀಗಳೆ ಕೊಳ್ವಂ!
—ಎಂದು ಪರಮನಿರ್ವೇಗಪರಾಯಣರಾಗಿ,

ಭರತಂಗೆಱಗುವರೆಂಬಿದೆ ಪರಿಭವಮೆಮಗೆ!
ಇಂತು ಮಾನಭಂಗಂ ಬರೆ ಬರ್ಪರಸೇವುದು?
—ಎಂದು ಪೂಣ್ದರ್ ಪರಮತಪೋಭರಮನನಿಬರುಂ ಪುರುತನಯರ್!

### ಭರತನ್

(ವಿಸ್ಮಿತಾಂತಃಕರಣನಾಗಿ, ಮನದೊಳೆ ಮೆಚ್ಚಿ)

ಅವಳಂಬಿಸಿ ನೆಗಱ್ದಿಕ್ಷ್ವಾಕುವಂಶವೊಂದನೆ
ಪುರಾಣಪುರುಷರವೋಲಿಂತವಿಹತಗತಿಯಿಂ
ಮುನ್ನನ್ವವಾಯಭೂಧರದ ಶಿಖರಮಂ ಮುಟ್ಟಿದರಾರ್!

(ಚಿಂತಾಂತರಂಗನಾಗಿ)

ಮುಂತೀಗಳೇನ್ ಬಟ್ಟೆ?
ಎನಗನುಜರಾಗಿಯುಂ ಚಲದೆನಗೆಱಗದೆ ಪೋಗಿ
ಭುವನಗುರುಗೆಱಗಿದರಂತನಿಬರುಂ!
ಅವಱಿಂದಗ್ಗಳಮೆನೆ ನೆಗಱ್ದೀ ಬಾಹುಬಲಿಯನೆಂತೆಱಗಿಸುವೆಂ?
ಖರಕಿರಣಸ್ಫುರಿತಕ್ಕಿದಿರುರಿವಂತಿರೆ ಸೂರ್ಯಕಾಂತಂ
ಎನ್ನೀ ತೇಜಸ್ಫುರಿತಕ್ಕೆ ಸೆಣಸಿನೊಳ್ ಮಾಱುರಿಗುಂ!
ಸೈರಿಸದು ತೇಜಮಾ ಭುಜಬಲಿಯಾ!
ಅದಱಿಂದನಾತನಂ ಸಾಮದಿಂದಮಳವಡಿಸಿ ನೋಡುವೆನ್!
ಸಾಮದೊಳಂ ಪದವಡದೊಡೆ—
ಬಲೀಕಿರ್ದಪ್ಪುದಲ್ತೆ ಪದವಡಿಸಲೆನ್ನ ಬಯಕೆಯ ದಂಡಂ!
ಪುರೋಹಿತ ರತ್ನ! ಬಾಹುಬಲಿಕುಮಾರಂಗೆ ಲೇಖಮನ್
ಉನ್ಮಯೂಖರತ್ನಾಭರಣಪ್ರಭೂತಸಮೇತಮನಟ್ಟುವಂ!
ಮಹಾಸಂಧಿವಿಗ್ರಹಿಗೆ ಬೆಸಸಿಂ!

## ಎರಡನೆಯ ಪ್ರವೇಶಂ

[ದೌವಾರಿಕನ್, ಸಂಧಿವಿಗ್ರಹಿ, ಬಾಹುಬಲಿ.]
[ಪೌದನಪುರದ ರಾಜಮಂದಿರದ ಆಸ್ಥಾನಮಂಡಪಂ.]

**ನೇಪಥ್ಯದೊಳ್**

ಜನಪದಸಮಭಿಜಾತನುಂ ಅನ್ವಯಾಗತನುಂ ಅಭಿರೂಪನುಂ
ಪ್ರತ್ಯುತ್ಪನ್ನಪ್ರತಿಭನುಂ ವಕ್ರೋಕ್ತಿನಿಪುಣನುಂ ಆದೇಯವಚನನುಂ
ಅನುದ್ಧತವೇಷನುಂ ಪರಿಚಿತಾಶೇಷದೇಶಭಾಷನುಂ
ವಯೋವೃದ್ಧನುಂ ಪ್ರಸಿದ್ಧನುಮಪ್ಪ ಮಹಾಸಂಧಿವಿಗ್ರಹಿ
ಭರತೇಶ್ವರನತ್ತಣಿಂ ಬರುತ್ತಿರ್ಪಂ!

**ದೌವಾರಿಕನ್**

ಇತ್ತಲಿತ್ತಲ್ ಸಂಧಿವಿಗ್ರಹಿವರ್ಯ! ಅದೊ, ಬಂದಪನ್ ಬಾಹುಬಲಿಕುಮಾರನ್!

**ಸಂಧಿವಿಗ್ರಹಿ**

(ಅತ್ತಣ್ಗೆ ದಿಟ್ಟಿಯಟ್ಟಿ)
ಮರಕತನಗಂ ದಿವ್ಯಂ ಮರ್ತ್ಯೋತ್ತಮಾಕೃತಿಯೆಂಬಿನಂ
ವಿರಚಿಸಿದನಿಂತಾದಿಬ್ರಹ್ಮಂ ಹರಿನ್ಮಣಿವರ್ಣನಂ!
ನೆರೆದುದಿದು ಮೇಣ್ ಕ್ಷಾತ್ರಂ ತೇಜಂ ಧರಾಧಿಪರೂಪದಿಂ ಧರೆಗೆ!
ಕುಮಾರನಂ ನೋಡೆ ಕಣ್ಣುಳ್ಳುಗುಂ!
(ವಿಸ್ಮಯಂಬಟ್ಟು)
ಪುರುಪರಮೇಶ್ವರಪುತ್ರಂ ಭರತೇಶ್ವರಚಕ್ರವರ್ತಿಗನುಜನೆನಲ್
ಸುಂದರರೂಪನೀ ಕುಮಾರನೆ ದೊರೆ!
ಚಕ್ರಿಗಮೆಸೆಯದಿನಿತು ತೇಜಃಸ್ಫುರಿತಂ!

**ಬಾಹುಬಲಿ**

(ಪ್ರವೇಶಿಸಿ)
ಸ್ವಾಗತಮಯ್ ಸಂಧಿವಿಗ್ರಹಿ!
ಭೂಪೋತ್ತಮನಿರ್ದನೆ ಸುಖದಿನ್
ಉದಾತ್ತಯಶಂ ನೆಗಟ್ಟೆ ನೆಗಟ್ದಯೋಧ್ಯಾಪುರದೊಳ್!

ಎಂತಾನುಂ ನೆನೆದಂ ಬಹುಚಿಂತಂ ಚಕ್ರೇಶನೆಮ್ಮ!
ದಿಗ್ವಿಜಯಮುಮಾದಂತೆಡಱದೆಯ್ದೆ ನಡೆದುದೆ?
ಸಂತಮೆ ದಕ್ಷಿಣಭುಜಕ್ಕೆ ಭೂವಲ್ಲಭನಾ?
ಅಗ್ರಜನಡಿಯಿಟ್ಟೆಡೆಗಳೊಳ್
ಅರಸುಗಳೆಲ್ಲಂ ಬಾಯ್ಕೇಳ್ದರೆಂದುಂ
ಆಶಾಂತರಂಗಳಳ್ಕಿದುವೆಂದುಂ
ಧರಣಿತಳಂ ಕೀರ್ತಿಸೆ ಕೇಳ್ದು ರಾಗಿಸುತ್ತಿರ್ಪೆವು.
ಇನ್ನುಮೇಂ ತೊದಳುಂಟೆ? ಇಲ್ಲೆಯೊ ಪೇೞಿಂ!

**ಸಂಧಿವಿಗ್ರಹಿ**

ಭವದಗ್ರಜದಿಗ್ವಿಜಯೋತ್ಸವಂ ಅಧಿಕಮಹೋತ್ಸವಂ ವಲಂ!
ನಿನಗಾದಂ ಶ್ರವಣಸುಖಮೆಂದೆ ದಿಙ್ಮಾತ್ರವರ್ಣನಂಗೆಯ್ವೆಂ.
ಉಂತದೇನೆನ್ನಳವೇ?
ಅದೆಂತೆಂದೊಡೆ ಮುನ್ನಂ ತ್ರೈಲೋಕ್ಯಸಾಮ್ರಾಜ್ಯಹೇತುಭೂತಮೆನಿಸಿದ
ಪುರುಪರಮೇಶ್ವರನ ಕೇವಲಜ್ಞಾನಪೂಜೆಯುಮಂ
ಪ್ರಾಜ್ಯಸಾಮ್ರಾಜ್ಯಕರಮಪ್ಪ ಚಕ್ರಪೂಜೆಯುಮಂ ನಿರ್ವರ್ತಿಸಿ,
ನಿನ್ನಗ್ರಜಂ ಭರತಂ ನಿಜಪ್ರತಾಪದಳವಂ ತೋಱಲ್ಕೆ
ಮಾಱಾಂಪ ಜೆಟ್ಟಿಗರಾರಪ್ಪೊಡಮಿಲ್ಲದಂತು
ಸಕಳಾಶಾಚಕ್ರಮಂ ಚಕ್ರಮೊಂದೆ ಗೆಲಲ್ಸಾಲ್ದಿರೆ
ದಿಗ್ಜಯಕ್ಕೆ ಪೊಱಮಟ್ಟಾ ಪೆಂಪು ಸಾಮಾನ್ಯಮೇ!
ಅಂತು ಪೊಱಮಟ್ಟು
ಪೂರ್ವದಕ್ಷಿಣಾಪರಪಾರಾವಾರತೀರವರ್ತಿಗಳಪ್ಪ ಭೂಪಾಳರನೆಱಗಿಸಿ,
ಗಂಗಾವೈಜಯಂತೀಸಿಂಧುದ್ವಾರಂಗಳಂ ನಿಜವಿಜಯವರೂಥವೊಂದಱೊಳೆ
ಲವಣಜಲಧಿಯಂ ಪೊಕ್ಕು [ನುಗುಳ್ದು,
ತದ್ವ್ಯಂತರಾಮರಾವಾಸಮಂ ಶರದಿಂದುರಿಪಿದನ್.
ಮಾಗಧ ವರತನು ಪ್ರಭಾಸಾಮರರಂ ಕರುಣಿಸಿಬಿಟ್ಟು,
ಅವರ ಕುಲಧನಪರಿಕರಮಂ ಕೆಯ್ಗೆಮಾಡಿದಂ.
ಅಲ್ಲಿಂಬಳಿಂ ವಿಜಯಾರ್ಧಕುಮಾರನಂ ಗೆಲ್ದಂ.

ಕೃತಮಾಳಾಮರನಗಿದಾನತನಾದಂ.
ತಮಿಸ್ರಗುಹೆಯ ವಜ್ರದ ಪಡಿ ಚಕ್ರಿಗೆ ತೆಱೆದತ್ತು.
ವಿಜಯಾರ್ಧಾಚಳಮಂ ಪೆಱಗಿಕ್ಕಿ ಬರೆ,
ಬಳಕಾವರ್ತರ ಬೆಸದಿಂದಂ ಬಂದ ಮೇಘಮುಖರಂ ತೂಳ್ದೋಡಿಸೆ,
ಚಕ್ರಿಗೆ ಬೆಸಕೆಯ್ದುದತ್ತು ಉತ್ತರಾರ್ಧಮಧ್ಯಮಖಂಡಂ!
ಮತ್ತಂ ಸಿಂಧುಪ್ರಪಾತಸಿಂಧುದೇವಿಯಿಂದಮಭಿಷಿಕ್ತನಾಗಿ ಪೋಗಿ
ಹಿಮವದ್ದಿವಿಜರುಮನೊತ್ತಿ ಕಪ್ಪಂಗೊಂಡು,
ವೃಷಭಾಚಲನಿಕಟಂಗಳೊಳ್ ಅಪ್ರತಿಹತದಿಗ್ವಿಜಯಪ್ರಶಸ್ತಿಯಂ
ಟಂಕೋತ್ಕೀರ್ಣಂಮಾಡಿ,
ಆರಜತಾದ್ರಿಮುದ್ರಿತಮಹೀತಳಮಂ ಬೆಸಕೆಯ್ಸಿ
ಸಿದ್ಧದಿಗ್ವಿಜಯಿನಾದಂ.
ಈಗಳಿಂತಿದು ದೇವ . . .
ಭವದೀಯಾಗ್ರಜಂ ರಾಜಾಧಿರಾಜಂ ಭರತೇಶ್ವರ ಚಕ್ರವರ್ತಿ
ನಿಮಗಟ್ಟಿದ ಮಹಾಪ್ರಸಾದಂ ಬಿನ್ನಪಂ.

**ಬಾಹುಬಲಿ**

ಅಪನೀತಮುದ್ರೆಯಂ ಮಾಡಿ ಬಾಜಿಸು, ಸಂಧಿವಿಗ್ರಹಿವರ್ಯ.

**ಸಂಧಿವಿಗ್ರಹಿ**

[ಉಪಾಯನರತ್ನಕರಂಡಕಮಂ ಕೊಂಡು, ಅಪನೀತಮುದ್ರೆಯಂ ಮಾಡಿ, ತದಂತಸ್ಸ್ಥಿತಂಗಳಪ್ಪ ರತ್ನಾಭರಣಂಗಳಂ ತೋಱಿ, ಕೋಶಾಧ್ಯಕ್ಷಹಸ್ತನ್ಯಸ್ತಂಗಳ್ಮಾಡಿ]

ದೇವ. ಲೇಖಮಿದು—
ಭೂವಲ್ಲಭಸೋತ್ಕ್ಷೇಪಭ್ರೂವಿಲಸಿತದತ್ತವಾಚನಾದೇಶಮಿದು—
ಇದಂ ಭಾವಿಸಿಂ.

[ಎಂಬು ಅತಿಮಧುರೋದ್ಘಾವಿತಗಂಭೀರನಾದದಿಂ ಬಾಜಿಸುವಂ.]

ಸ್ವಸ್ತಿ.
ಸಮಸ್ತವಿಷ್ಟಪಾಧೀಶ್ವರಪುರುಪರಮೇಶ್ವರಚರಣಸರಸಿಜರಜೋರಂಜಿತ-
ಚಕ್ರರತ್ನಪ್ರಭಾಸಾದಿತನಿಖಿಲದಿಕ್ಚಕ್ರಂ [ಮಣಿಕಿರೀಟಮಕರಿಕಾಚಕ್ರಂ

ಭರತೇಶ್ವರಚಕ್ರವರ್ತಿ
ನಿಜಪ್ರಿಯಾನುಜಬಾಹುಬಲಿಕುಮಾರನಂ ಪರಮಾಶೀರ್ವಾದದಿಂ ಪರಸಿ,
ಕನಕಪತ್ರಾಂಕಿತಕಾರ್ಮುಕಲತಾಲಂಬನಂಗಳುಂ
ವಿಜಯೋತ್ಸವತೋರಣಸ್ತಂಭಂಗಳುಂ
ವೀರಶ್ರೀಭುಜಂಗೀಸಮಾಶ್ರಯಶ್ರೀಖಂಡಕಾಂಡಂಗಳುಮಪ್ಪ
ದೋರ್ದಂಡಂಗಳಿಂದಮತಿನಿಬಿಡಾಲಿಂಗನಂಗೆಯ್ದು
ಕಾರ್ಯಮಂ ಬೆಸಸಿರ್ಕುಂ.

**ಬಾಹುಬಲಿ**

ಅಗ್ರಜನೇನ್ ಬೆಸಸಿರ್ಕುಂ?

**ಸಂಧಿವಿಗ್ರಹಿ**

ಎನ್ನಣುಗದಮ್ಮನಿಲ್ಲದೆ ಬಿಮ್ಮನೆ
ಸಾಮ್ರಾಜ್ಯಮಿನಿತುಮಾದೆಱಕಮುಮತ್ಯನ್ನತಿಯಲ್ತೆನಗೆ—
ಆತಂ ಮುನ್ನೆ ಬಗದೊಡೆಂದು ಬೆಸಸಿಯಟ್ಟಿದನೆನ್ನಂ!
ಬಾಹುಬಲಿಕುಮಾರ!
ವಿನಯಂ ಸಹಜಂ ಕೃತ್ರಿಮಂ ಎನಿಸಿದುವು;
ಅವು ಬೇರೆವೇರೆ ವಿದ್ವಜ್ಜನಮಂ ಮನದೆಗೊಳಿಸುವುವು;
ಇವೆರಡುಂ ನಿನಗೊಳವು. ಆರಾರ ಮನಮುಮಂ ರಂಜಿಸವೇ?

**ಬಾಹುಬಲಿ**

[ದೂತವಚನಾಕರ್ಣನೋದೀರ್ಣಕ್ರೋಧೋದ್ಗತಚ್ಛದಚ್ಛೇದಜಳಧಾರಾ-
ಸಾರಭೀಕರಾಲೋಹಿತಕಪೋಳತಳಮುಂ ಉದ್ದೀಪನಪಿಂಡಪ್ರದೀಪ್ತ-
ಕಪೋಲೋಚ್ಚಳದತುಚ್ಛಮದಜಳಚ್ಛಟಾಟೋಪಭೀಷಣಾರುಣಗಂಡ-
ಸ್ಥಳಮುಮಪ್ಪ ಗಂಧಸಿಂಧುರೇಂದ್ರಮನನುಕರಿಸಿ ಕೋಪಗರ್ಭಸ್ಮಿತಂಬೆರಸು]

ಮುನ್ನಂ ಸಾಮಮನೆಮ್ಮ ಮನಂ ನೋಡಲ್ ನುಡಿದು
ಭೇದಮಂ ದಂಡಮುಮಂ ನಿನ್ನ ಜೀವನಿತಂ ನುಡಿದೆ!
ಇದೇನ್ ನುಡಿಗಳೊ ಸಮುಜೀಕೊಂಡ ನುಡಿಗಳ್ ನಿನ್ನಾ!

ಇನಿತೊಂದು ನುಡಿಯ ಬಲ್ಮೆಯೆ ನಿನಗಿಲ್ಲದೊಡೇಕೆ
ನಿನ್ನನಾಳ್ದಂ ನಿನ್ನಂ ಮನವೊಲ್ದು ನಚ್ಚಿಯಟ್ಟಿದನನಾಕುಳಂ!
ದೂತನಿಂತು ನುಡಿಯಲ್‌ವೇೞ್ಕುಂ!

ನೀನ್‌ನಿನ್ನ ನೃಪನ ದಿಗ್ವಿಜಯೋನ್ನತಿಯಂ ಪೊಗೞ್ದು ಮೂರ್ಛೆವೋಪೈ!
ಮುಂದಿಟ್ಟು ಚಕ್ರಮಂ ತಿರಿತಂದುದುಮಂ
ಅದೇನೆಂದುನ್ನತಿಮಾಡಿ ಪೊಗೞ್ವೆ? ಒಳಗಱಿಯದುದೇ!

ಪಸಿದುಣ್ಣ ಪಟ್ಟು ಬರ್ದಿರ್ದು ಸಮುದ್ರದ ತಡಿಯೊಳ್
ಉದಕಮಂತ್ರದ ಬಲದಿಂ ನುಸುಳ್ದೊಡೆ ಜಳನಿಧಿಯಂ
ಕರುಣಿಸಿ ಕೊಟ್ಟರ್ ಧನಮನ್! ಅಂಜಿ ಕೊಟ್ಟರೆ ದಿವಿಜರ್?

ಧರೆಯೊಳ್ ಕುಲಾಲಚಕ್ರಂ ತಿರಿವಂತಿರೆ ತಿರಿಯೆ ಚಕ್ರಂ
ಅದರ ಬೞಿಯಿಂ ತಿರಿತಿರಿದು
ಮಾಡಿದಂ ಕುಲಧರಕುಲದೊಳ್ ಪಿಱಿದು ಮಹಿಮೆಯಂ ನಿಮ್ಮರಸಂ!

ಉತ್ತರ ಭರತದೊಳಾದಾಪತ್ತಂ ನೀನಱಿಯೆಯುಕ್ಕುಂ.
ಅನಿತುಂ ಬಲಮಂ ಮುತ್ತಿ ಬಳಾಕಾವರ್ತರ್
ಸುತ್ತಲುಮೇಸಾಡಿ ಪಿರಿದು ತಿಣಿಕಂ ತಂದರ್!

ಬೇಡವಡೆ ಮುಸುಱಿಗೊಂಡೇಸಾಡೆ
ಸುರುಳ್ದಗಿದು ಕೊಡೆಯ ಚರ್ಮದ ಮಱೆಯೊಳ್
ಗೂಡುಗೊಳುತಿರ್ದ ಶೌರ್ಯಕ್ರೀಡೆಯ ದಿಗ್ವಿಜಯಮೆಸೆದುದೆಮ್ಮಗ್ರಜನಾ!

ಬರೆಯಿಸಿದಂ ಪೂರ್ವಮಹೀಶ್ವರನಾಮಮನೆಯ್ದೆ ಕಳೆದು
ವೃಷಭಾಚಲದೊಳ್ ಭರತಂ ನಿಜನಾಮಮನ್—
ಎನೆ ಪರಿಹಸಿತಂ ಬುಧಜನಕ್ಕದಲ್ಲದೆ ಪೆಱತೇಂ!

ಧನಮೆಂಬುದು ವಿಭುಗೆ ಯಶೋಧನಂ!
ಅದನಿಂತಳಿಪಿ ಕಳಿಪಿ ಕಿಡೆಮಾಡಿರ್ದಾತನ ಪಡೆದ ಧನಮುದೇತರ ಧನಂ?
ಅದಱಿಂ ನಿಧನಮೆಯ್ದಿದರ್ ಪಲರರಸರ್!

ಪಿರಿಯಣ್ಣಂಗೆಱಗುವುದೇಂ ಪರಿಭವಮೇ?
ಕೇಱು ನೆತ್ತಿಯೊಳ್ ಬಾಳಂ, ನಿರ್ನೆರಮೂಱು ಛಲದಿನೆಱಗಿಸಲಿರೆ—
ಭರತಂಗೆಱಗುವೆಱಕಮಂಜಮೆಯಲ್ತೇ!

ವಿನಯಮುಮೆಱಕಮುಮುಪ್ಪುದು ಸನಾಭಿಗಳ್ ಸಂಗತಂಗಳಪ್ಪೊಡೆ!
ಪೆಸರ್ಗೊಂಡನಿತಱೊಳೆನ್ನಂ ಸೈರಿಸನೆನೆ
ಭರತಂಗೆಱಗಿ ಲೋಕದಿಂ ನಗಿಸುವೆನೇ!

ಭರತಂ ಷಟ್ಖಂಡಭೂವಲ್ಲಭನೆನೆ ಸಿರಿಯಂ ಗೆಂಟಱೊಳ್ ಕೇಳ್ದು
ರಾಗಂಬೆರಸಿರ್ಪೀ ನಣ್ಪೆ ಸಾಲ್ಗುಂ!
ಕರೆದೊಡೆ ಬೆಸನೇನೆಂಬ
ಜೀಯೆಂಬ
ದೇವೆಂಬರಸಾಳೆಂಬ
ದೈನ್ಯಕ್ಕೆಲವೊ ತನುವನಾನೊಡ್ಡುವಂತು—
ಆದಿದೇವಂ ಪುರುದೇವಂ ದೇವದೇವಂ ಕುಡೆ ಪಡೆದ ನೆಲ-
ಕ್ಕಾರೊಳಂ ಪಂಥಮುಂಟೇ?
ಧರೆಯಂ ಕುಡುವಂದು
ಎನಗಂ ಗುರು ತನಗಂ ರಾಜನಾಮಮಂ ಕೊಟ್ಟೊಡೆ—
ನೋಡಿರೆ—
ತನಗೀಗಳ್ ರಾಜಾಧಿರಾಜನೆಂದಿಟ್ಟುಕೊಂಡನಡಕಿಲ್ವೆಸರಂ!
ಚಕ್ರಂ ಪುಟ್ಟಿದೊಡೀಗಳ್ ಚಕ್ರೇಶ್ವರನೆಂಬ ಪೆಸರುಮಾಯ್ತಕ್ಕವು!
ತಾಂ ಚಕ್ರೇಶನಾದೊಡಂ
ತನ್ನಾಕ್ರಮಣಮನೆನ್ನೊಳೇಕೆ ಕೆಮ್ಮನೆ ತೋರ್ಪಂ?

ದೊರೆಯಲ್ಲದಂಗೆ ನುಡಿವುದು ಪುರುಳಿಲ್ಲದ ಮಾತನ್.
ಎಮ್ಮೊಳಂ ನುಡಿವುದೆ ಪೇೞ್?
ಎರಲೆಗೆ ಪಾಡುವ ಗೋರಿಯನ್
ಅರಣ್ಯದೊಳ್ ಮೃಗವಿರೋಧಿಗಂ ಪಾಡುವುದೇ?

ಪುರುತನಯರ್ ಭುಜಬಲಿಯುಂ ಭರತನುಮೆನೆ ದೊರೆಗೆವಂದೊಡೆ
ಆರಳವುಮನೀ ಧರೆಯಱಿಯಲೊಡಂ ತೂಗಲ್
ಧರೆಗೆ ತುಲಾದಂಡಮಲ್ತೆ ಮದ್ಭುಜದಂಡಂ!

ಅದಲ್ಲದೆಯುಂ
ಉದಾರವೀರಚರಿತನಿರತಕದನಕರ್ಕಶಕ್ಷತ್ರಿಯಂಗೆ
ವಿಪಕ್ಷಕ್ಷತ್ರಿಯಪರಾಕ್ರಮಾಕರ್ಣನೋದೀರ್ಣಕ್ರೋಧದೊಳ್
ಅಳೀಕಭ್ರುಕುಟಿಯುಂ ಅನರ್ಥಕಲಲಾಟತ್ರಿಪತಾಕೆಯುಂ
ಅಪಾರ್ಥವಿಲೋಹಿತವಿಲೋಚನರುಚಿಯುಂ
ನಿರರ್ಥಕನಿಷ್ಠುರೋಷ್ಠಪುಟಸಂದಂಶಮುಂ
ನಿಷ್ಪ್ರಯೋಜನಸ್ವೇದಜಳೋದ್ಗಮಮುಂ
ನಿಷ್ಪಂದನಾಸಾಸ್ಫುರಿತಮುಂ ನಿಷ್ಕಾರಣಕಾಯಕಂಪನಮುಂ
ನಿರಾಲಂಬನವಾಗಾಡಂಬರಮುಂ ತಕ್ಕುದಲ್ತು.

ಪೋಗು. ನಿನ್ನರಸಂಗಱಪು.
ನೆಗೞ್ದೀ ಷಟ್ಖಂಡಭೂಮಂಡಲಮನನಿತುಮಂ ಗೆಲ್ದಖಂಡಪ್ರತಾಪಂ
ನೆಗೞ್ದಂತಾಜುಂ ಬಲಂಗಳ್ಪೆರಸೊದವಿದ ಸಂಗ್ರಾಮಸಂರಂಭದಿಂದಂ
ಬಗೆಯಂ ಪ್ರಾಣಪ್ರಿಯಸ್ತ್ರೀಜನತನಯಧನವ್ರಾತದೊಳ್ ಮಾಡದೆ.
ಆತರ್ಾಜಿಗೆ ಬಂದೊಡ್ಡಲ್ಕೆ ಪೇೞ್!
ಸಂಗರನಿಕಷದೊಳೆಮ್ಮಂದಮಂ ನೀನೆ ಕಾಣ್ಬೈ!

## ಮೂಱನೆಯ ಪ್ರವೇಶಂ

[ಸಂಧಿವಿಗ್ರಹಿ, ಭರತನ್.]

### ಸಂಧಿವಿಗ್ರಹಿ

ನಿನಗೀ ಷಟ್ಖಂಡಭೂಮಂಡಲಮೆಱಗಿದುದೇಂ ಸಾಲದೆ? ಬೇಡದು.
ಉದ್ವೃತ್ತನೊಳಿನ್ನೇನೆಂದು ದೇವರ್ಕಡೆಗಣಿಸಿರೆ ಸೌಂದರ್ಯಮಂ ಕಾದ ಪೆಂಪೀ
ವನಧಿದ್ವೀಪಾಂತರಾಳಕ್ಷಿತಿಯೊಳೆಸಗುವಾಕ್ಷೇಪಮಂ ಮಾಣ!
ನೀಂ ಕ್ರೋಧನನಾಗಲ್!
ನಿನ್ನ ತಮ್ಮಂ ನಿನಗೆಱಗನ್!
ಇದಂ ನೀಂ ನಂಬು ರಾಜಾಧಿರಾಜಾ!

### ಭರತನ್

(ಶೌರ್ಯಮದಾಡಂಬರದಿಂದಂ)
ತುದಿಯೆಯ್ದಿತ್ತೆಮ್ಮ ವಿಶ್ವಕ್ಷಿತಿತಳಜಯಂ!
ಇಂತೆಮ್ಮ ದಾಯಾದನುಂ ಕೋಪದಿನೆನ್ನೊಳ್ ಕಾದಲೆಂ-
ದುಬ್ಬರಿಸಿದ ಸಮರಾಟೋಪದಿಂ ನಿಂದೊಡಂ
ಮಾಣ್ಬುದು ಸೂಱಲ್ತು!
ಎಮ್ಮ ಸಾಪತ್ನನ ಭುಜಬಲಮಂ ನೋೞ್ಪಂ!

### ನೇಪಥ್ಯಗಾನಂ

ಭುವನೇಶಂ ಕ್ಷತ್ರಪುತ್ರಾಗ್ರಣಿಯ ಭರತನಕ್ಷೋಹಿಣೀವೀರಕಂಠೀ-
ರವಸಂದೋಹಕ್ಕೆ ರೋಮಾಂಚಮನೆ ಕವಚಮಂ ಮಾಡುತುಂ ವೀರಪತ್ನೀ-
ನಿವಹಕ್ಕಾನಂದಬಾಷ್ಪಾವಳಿಯನೆ ಕುಚದೊಳ್ ಹಾರಮಂ ಮಾಡುತುಂ ಭೂ-
ಭುವನಾಂತರ್ಭಾಗಮಂ ಪರ್ಬಿದುದು ಸಮರಸನ್ನಾಹಭೇರೀನಿನಾದಂ

[ಸಮರಸನ್ನಾಹ ಭೇರೀನಿನಾದಂ.

## ನಾಲ್ಕನೆಯ ಪ್ರವೇಶಂ

[ಯುದ್ಧಭೂಮಿ. ಭರತ, ಬಾಹುಬಲಿ, ಮಂತ್ರಿಗಳ್.]

ಮಂತ್ರಿ ೧

ಇವರಿರ್ಬರ್ ಅರಸುಗಳಪ್ಪೊಡೆ ಚರಮದೇಹಧಾರಿಗಳ್.

ಮಂತ್ರಿ ೨

ಇವರ ಯುದ್ಧಮೆಂಬುದು ಅತಿಕ್ರೂರಗ್ರಹಯುದ್ಧದಂತೆ
ಸಕಳಪ್ರಜಾವಿನಾಶಕರಮಲ್ಲದೆ ಪೆಜತಲ್ತು.

ಮಂತ್ರಿ ೧

ಚತುರಂಗಬಲಯುದ್ಧದೊಳಗಲ್ಲದೆ ಸೋಲಗೆಲ್ಲಮೆಂಬುದಿಲ್ಲ.

ಮಂತ್ರಿ ೨

ಸಮಸ್ತಜನಸಂಹರಣಕಾರಣಮಪ್ಪ ರಣದೊಳೇವಂದಪುದು?
ಧರ್ಮಯುದ್ಧಮನೆ ಸಮಕಟ್ಟುವಂ.

(ಚಕ್ರವರ್ತಿಯಲ್ಲಿಗೆ ವಂದು)

ಮಂತ್ರಿ ೨

ದೇವ, ಜಯಮಂ ಕೈಕೊಳ್ವುದು
ದೃಷ್ಟಿಯುದ್ಧ ಜಳಯುದ್ಧ ಮಲ್ಲಯುದ್ಧದೊಳ್!
ಜನಕ್ಷಯಕರಣದೊಳೇಂ?
ಪಾಪಮುಮಯಶಮುಮಪ್ಪನಿತೆ!
ಕಡೆಗಣಿಪುದಿದಂ.

ಮಂತ್ರಿ ೧

ಉೞಿವುದು ಭುಜಬಲದಳವಂ.
ಘೞಿಲನೆ ಕೊಳ್, ಹೀನಬಲನನಧಿಕಬಲಂ
ತೊತ್ತಳದುಳಿದನೆಂಬ ಲೋಕದ ಪೞಿ ಪೊರ್ದದೆ ಮಾಣೆ
ಧರ್ಮಯುದ್ಧದೊಳೆಸಗಿಂ.

**ಭರತನ್**

ಇಂತಾದೊಡೆಮಗೆ
ಬಾಹುಬಲಿಯ ಸಮರಸಂಘಟ್ಟದೋಹಳಮಿದು
ದರಿದ್ರಂಗೆ ಹೀನಗರ್ಭದೋಹಳದಂತಾದುದು!
ನಿಮ್ಮಿಚ್ಛೆ!

(ಮಂತ್ರಿಗಳ್ ಬಾಹುಬಲಿಯಲ್ಲಿಗೆ ವಂದು)

**ಮಂತ್ರಿ ೨**

ದೇವ, ಜಯಮಂ ಕೈಕೊಳ್ವುದು
ದೃಷ್ಟಿಯುದ್ಧ ಜಳಯುದ್ಧ ಮಲ್ಲಯುದ್ಧದೊಳ್!
ಜನಕ್ಷಯಕರಣದೊಳೇಂ?
ಪಾಪಮುಮಯಶಮುಮಪ್ಪನಿತೆ!
ಕಡೆಗಣಿಪುದಿದಂ!

**ಮಂತ್ರಿ ೧**

ಉಱುವುದು ಭುಜಬಲದಳವಂ.
ಘೞಿಲನೆ ಕೊಳ್, ಹೀನಬಲನನಧಿಕಬಲಂ.
ತೊತ್ತೞದುಳಿದನೆಂಬ ಲೋಕದ ಪೞ ಪೊರ್ದದೆ ಮಾಣೆ
ಧರ್ಮಯುದ್ಧದೊಳೆಸಗಿಂ.

**ಬಾಹುಬಲಿ**

'ಎನ್ನ ಚತುರಂಗಬಲಮನಿದನ್ ನರರಾಂಪನ್ನರ್!'
ಎಂಬ ನಿಮ್ಮರಸನ ಗರ್ವೋನ್ನತಿಯುಡುಕುಮನಿನಿಸಾನುಂ ನೋಡಿ,
ಇಂ ಧರ್ಮಯುದ್ಧಮಕ್ಕೆಮ ಬೞಯಂ!

[ನಿಜಭುಜದಂಡೋಚ್ಚಂಡಚಾಪಟಂಕಾರಮಂ ಮಾಜ್ಪಂ.]

**ಮಂತ್ರಿ ೧**

ಯುವರಾಜ, ಬಿಸುಡುವುದಸದಾಗ್ರಹಮಂ!
ಪ್ರಸನ್ನಗಂಭೀರಚಿತ್ತದಿಂದಿದನವಧಾರಿಸುವುದು!

**ಮಂತ್ರಿ ೨**

ಮನಂಬಸದೆ ಒರ್ಮೆಗೆ ಸಲಿಪುದೆಮ್ಮ ಮುದುಗಣ್ಮನಮಂ.

**ಬಾಹುಬಲಿ**

ನಿಮ್ಮಿಚ್ಛೆ!

**ಮಂತ್ರಿಗಳ್**

ಆನಂದಭೇರಿಯಂ ಪೊಯ್ಸಿಂ!
ಧರ್ಮಯುದ್ಧವ್ಯತಿಕರಂ ಸಂದುದು!

(ಎಂದು ಘೋಷಿಸಲ್ವೇೞ್ದು)

ಬಾಹುಬಲಿ ಕುಮಾರನ ಭರತೇಶ್ವರನ ಪಕ್ಷದ ರಾಜಲೋಕಂ
ಎರಡುಂ ದೆಸೆಯೊಳಂ ಮಧ್ಯಸ್ಥರಾಗಿ ಮಿಡುಕದೆ ನೋಡುತಿರ್ಪುದು!

(ಎಂದು ನಿಯಮಿಸಿ)

ಇಂತಿದು ಮೊದಲ್—ದೃಷ್ಟಿಯುದ್ಧಂ!

[ಎಂದಿರ್ಬರುಂ ನೀಲನಿಷಧಗಿರಿಗಳೊಂದೊಂದಱೊಳ್ ಬಂದು ಪೊಣರ್ಮ ನಿಲ್ವಂತೆ ನಿಲಿಸಲವರೊರ್ವರೊರ್ವರೆವೆಯಿಕ್ಕದೆ ನೋಡುವಲ್ಲಿ]

**ನೇಪಥ್ಯಗಾನಂ**

ಲಲಿತಮುಖಸರಸಿಜಂ ನಿ-
ಶ್ಚಳಪಕ್ಷ್ಮಂ ಸ್ತಿಮಿತತಾರಕಂ ಭುಜಬಲಿ ಕ-
ಣ್ಣೊಳೆ ತವೆ ಪೀರ್ವವೊಲೇ ನಿ-
ಶ್ಚಳತನು ನಡೆನೋಡೆ ಭರತರಾಜಂ ಸೋಲ್ತಂ

**ಬಾಹುಬಲಿ**

ಮುಗಿದತ್ತು ದೃಷ್ಟಿಯುದ್ಧಂ! ಜಳಯುದ್ಧಮಿಂಬಳಿಂ!

[ಎಂದಿರ್ವರುಂ ಕೊಳನಂ ಪುಗುವರ್.

**ಮಂತ್ರಿ ೧**

ಕರಿಯೂಥಪತಿಗಳೆರಡುಂ ಸರಸೀಜಳಮಂ ವಿಳಾಸದಿಂ ಪುಗುವವೋಲ್
ಆದರದಿಂದೆ ಪೊಕ್ಕು ತುಳುಕಿದರ್—
ಅರವಿಂದರಜಃಪಿಶಂಗಿತಾಚ್ಛೋದಕಮಂ!

ಮಂತ್ರಿ ೨

ಭರತನ ಮುಖದೊಳ್ ಪರ್ವಿದ ಖರಕೋಪಾನಳನನ್
ಎಯ್ದೆ ನಂದಿಸುವವೋಲ್
ಆ ಮರಕತವರ್ಣಂ ಕರಿಕರಪರಿಘದಿನ್
ಒಡನೆ ತುಳುಂಕಿದಂ ತಿಳಿನೀರಂ!

ಮಂತ್ರಿ ೧

ಭರತೇಶ್ವರನ್ ಪಂಚಶತಶರಾಸನೋತ್ಸೇಧನ್!

ಮಂತ್ರಿ ೨

ಬಾಹುಬಲಿಕುಮಾರನ್ ಪಂಚವಿಂಶತ್ಯುತ್ತರಪಂಚಶತಶರಾಸನೋತ್ಸೇಧನ್!

ಮಂತ್ರಿ ೧

ಓವೊ! ಭರತಂ ಭರದಿಂದಂ ತುಳುಕಿದ ನೀರ್
ಭುಜಬಲಿಯುರದೊಳ್ ಹಾರಾಂಶುರುಚಿಯನಿರ್ಕುಳಿಗೊಂಡತ್ತು!

ಮಂತ್ರಿ ೨

ಜಳಯುದ್ಧಮುಂ ಚಕ್ರಿಗೆ ಪರಿಭವಮನಿತ್ತತ್ತು!

ಮಂತ್ರಿ ೧

ಬನ್ನಿಂ. ಮೂಱನೆಯ ಮಲ್ಲಯುದ್ಧಮಂ ನೋಳ್ಪಂ.

ಮಂತ್ರಿ ೨

ಅದೊ, ಮಲ್ಲಯುದ್ಧದೊಳ್ ಪೊಣರ್ದರ್!

ಮಂತ್ರಿ ೧

ಏಂ ಕರಣಂ! ಏಂ ಗಾಯಂ! ಏಂ ಪರಿಣತೆ!

ಮಂತ್ರಿ ೨

ಪಿಡಿದೆತ್ತಿದನಣ್ಣನನಾ ತಮ್ಮಂ!

ಮಂತ್ರಿ ೧

ಕನಕಾಚಲಮಂ ಪೊತ್ತುದು ಘನ ಮರಕತಶೈಲಂ
ಎನಿಸಿರ್ಪುದು ಗಡ!

**ಮಂತ್ರಿ ೨**

ಏಕೆಯೊ ಅಂತೆಯೆ ಪೊತ್ತಿರ್ಪನ್?
ಇಕ್ಕಲೊಲ್ಲನ್ ನೆಲದೊಳ್!

**ಬಾಹುಬಲಿ**

ಭರತಾವನೀಶ್ವರಂ ಗುರು ಪಿರಿಯಣ್ಣಂ ಚಕ್ರವರ್ತಿ ಮಹಿಮಾಕರನ್!
ಈ ದೊರೆಯನುಮಳವೞಿಯೆ ವಸುಂಧರೆಯೊಳ್ ತಂದಿಕ್ಕಿ
ಭಂಗಮಂ ಮಾಡುವೆನೇ? ಮಾಡೆನ್.

[ಎಂದೊಯ್ಯನಿೞಿಪೆ ನೆಲದೊಳ್, ದುಂದುಭಿರವದೊಡನೆ
ವಿಜಯಘೋಷಣೆ ನೆಗಬ್ದುದು ಭುಜಬಲಿಯ ಬಲದೊಳ್;
ಕುಂದು ಕರಂ ಪಿಱಿದುಮಪ್ಪುದು ಭರತನ ಬಲದೊಳ್.]

**ಮಂತ್ರಿ ೨**

ಚರಮತನು ಸಾರ್ವಭೌಮಂ ಪುರುಪರಮೇಶ್ವರತನೂಜಂ
ಇಂತತಿಭಂಗಂ ದೊರೆಕೊಂಡುದಿಂದು ಭರತೇಶ್ವರಂಗೆ
ಹುಂಡಾವಸರ್ಪಿಣೀವಿಳಸನದಿಂ!

**ಮಂತ್ರಿ ೧**

(ವಿಷಣ್ಣನಾಗಿ)

ಅಪ್ಪುದು, ಹುಂಡಾವಸರ್ಪಿಣೀವಿಳಸನದಿಂ!

**ಭರತನ್**

(ನೆರೆದೆರಡುಂ ಬಲದರಸುಗಳಿರೆ ಪರಿಭವಮಂತು ತನಗೆ ಬರೆ, ಮುಳಿಸಿನ ದಳ್ಳುರಿಗಳನುಗುೞುತ್ತುಂ, ಚಕ್ರರತ್ನಮಂ ನೋಡಿ)

ಪೋಗು, ಚಕ್ರಮೆ ಪೋಗು!
ಪೋಗು ಭುಜಬಳಿಯ ಮೇಗೆ!

(ಚಕ್ರಂ ಭುಜಬಲಿಯತ್ತಣ್ಗೆ ಚಲಿಸುಗುಂ)

**ನೇಪಥ್ಯಗಾನಂ**

ಬೆಸಸಿದೊಡದು ಮಾರ್ಕೊಳ್ಳದೆ
ಬೆಸನಂ ಬಲವಂದು ಬಾಹುಬಲಿಯನಣಂ ಭೇ-

ದಿಸಲಾಱದುದಱಿನಿರ್ದುದು
ಮುಸುಳ್ದಿಸಕಂಗೆಟ್ಟು ಬಲದ ಮುಯ್ಪಿನ ಕೆಲದೊಳ್

[ಆಗಳ್—ಧರೆಯಂ ಪರ್ಬಿದುದು ಈ ಬಾಹುಬಲಿನೃಪಯಶೋಧ್ವಾನಮೆಂಬಂತಿರೆ ದೇವಾನೀಕಿನೀದುಂದುಭಿರವಂ ಅಮರೀವೃಂದಮಾಂಗಲ್ಯಗೇಯ ಸ್ವರದೊಳ್ ಕೈಗೂಡಿ ಪೊಣ್ಮುತ್ತಿರೆ, ಮುದಿತ ಸುರಾನಂದ ಬಾಷ್ಪೋದ ಬಿಂದೂತ್ಕರಮೆಂಬಂತಾಗೆ ತಱಿಲರಲ ಮಱಿಗಳಂ ಪುಷ್ಪಮೇಘ ಪ್ರತಾನಂ]

**ಮಂತ್ರಿಗಳ್**

ತನಗಲ್ಲದುದಂ ಮಾಡಿದಂ ಚಕ್ರೇಶಂ!
ತನಗಲ್ಲದುದಂ ಮಾಡಿದಂ ಚಕ್ರೇಶಂ!

**ಭರತನ್**

[ಅವರ ನುಡಿಗಳ್ಗೆ ನಾಣ್ಚಿ, ಅವನತಮುಕುಟನಾಗಿ, ಮೋನಂ.]

**ಬಾಹುಬಲಿ**

(ತನ್ನ ದಕ್ಷಿಣಬಾಹುವ ಕೆಲದಲ್ಲಿ ನಿಂದ ಚಕ್ರಮಂ ಕಂಡು)

ಸಾಹಸರಸಿಕನೆ ನಾನ್!
ಈ ಸಾಹಸಮಂ ನೆಗಳ್ದನೆನ್ನೊಳಂ ಭರತೇಶಂ?
ಛೀ! ಕಳೆದಿಡುವುದೆ ಕಷ್ಟಂ ಭೂತಳರಾಜ್ಯವಿಮೋಹಂ.
ಇಂತಳವುಗಿಡಿಸಿದುದು ಮನುಕುಲತಿಳಕನುಮಂ.
ಖಳಮಹೀಶರು ಬೀದವರಳವೇ!

ಸೋದರರೊಳ್ ಸೋದರರಂ ಕಾದಿಸುವುದು.
ಸುತನ ತಂದೆಯೆನಲ್ ಬಿಡದು.
ಉತ್ಪಾದಿಸುವುದು ಕೋಪಮನ್.
ಅಳವೀ ದೊರೆತೆನೆ—ತೊಡರ್ವುದೆಂತು ರಾಜ್ಯಶ್ರೀಯೊಳ್?

ಅದಲ್ಲದೆಯುಂ
ಅಶೇಷವಿದ್ಯಾನದೀಶೋಷಣಗ್ರೀಷ್ಮಾಂಶುಮಾಲಿಮಯೂಖಮಾಲೆಯುಂ
ಉಪಶಮಾಂಭೋರಾಶಿಪ್ರಳಯಬಾಡಬಾನಳಜ್ವಾಲೆಯುಂ
ವಿನಯಾಮೃತಮರೀಚಿಸಂಭಾದನಾಂಭೋದಸಂತತಿಯುಂ

ಉಭಯಲೋಕವಿವೇಕವಿರೋಚನಾಸ್ತಮಯವೇಲೆಯುಂ
ಧರ್ಮದ್ರುಮಚ್ಛೇದಪರಶುಧಾರೆಯುಂ
ವಿಷಯವಿಷದ್ರುಮಕಂದಳಿಯುಂ
ಇಂದ್ರಿಯಲುಬ್ಧಕಸ್ವಚ್ಛಂದವಿಹಾರಗಹನಭೂಮಿಯುಂ
ದುರ್ಯಶಃಪಾಂಶುಪ್ರಸರಮಹಾವಾತ್ಯೆಯುಮಪ್ಪ
ಪಾತಕಿಯೊಳ್ ಲಕ್ಷ್ಮಿಯೊಳ್ ನೆರೆಯಲ್ಕಿಂತೀತನೆ ಬಗೆಗೆ!
ಆಂ ಪುರುತನುಜಾತರ ಬಗೆದುದನೆ ಬಗೆವೆನಳಿಪಂ ಬಗೆಯೆಂ!
ಕಿಡುವೊಡಲ ಕಿಡುವ ರಾಜ್ಯದ ಪಡೆಮಾತುಗೊಳಲ್ಕಮೆನ್ನ ಮೆಯ್ಯಗಿದಪುದು.
ಈಗಡೆ ಜೈನದೀಕ್ಷೆಯುಂ ಕೊಂಡಡಿಗೆಱಗಿಸುವೆಂ ಸಮಸ್ತಸುರಸಮುದಯಮಂ.
ಅಕ್ಕಕ್ಕುಮತೀಂದ್ರಿಯಮೆ ಸುಖಂ!

(ಭರತೇಶನತ್ತಣ್ಗೆ ನಡೆದು)

ಸಿಗ್ಗನುೞ, ಚಕ್ರೇಶ.
ಮುಳಿಸಂ ನೀನೆಂದಿಂಗಂ ಬಿಸುಡು.
ಈ ತಮ್ಮಂದಿರೊಳಿಂತಿಂತು ಕಟ್ಟುವರ್ಪುದು ಪೆಂಪೇ?
ನಿನ್ನೀ ಬೆಸಸಿದ ಚಕ್ರಮದೆನ್ನೀ ದೇಹಾದ್ರಿಯಂ ಗೆಲಲ್ ನೆಱೆಯದು!
ನೀಂ ಬಿನ್ನನಿದೇಕಿರ್ಪೆ? ಅದೆಂತೆನ್ನ—
ಗೆಲಲ್ ವಜ್ರಗಿರಿಯನಾರ್ಕುಮೆ ವಜ್ರಂ?
ನೆಲಸುಗೆ ನಿನ್ನ ವಕ್ಷದೊಳೆ ನಿಶ್ಚಳಂ—ಈ
ಭಟಖಡ್ಗಮಂಡಳೋತ್ಪಲವನವಿಭ್ರಮಭ್ರಮರಿಯಪ್ಪಮನೋಹರಿ ರಾಜ್ಯಲಕ್ಷ್ಮಿ!
ಭೂವಲಯಮನ್ ಅಯ್ಯನಿತ್ತುದುಮನ್ ಆಂ ನಿನಗಿತ್ತೆಂ!
ಇದೇವುದಣ್ಣ?
ನೀನೊಲಿದ ಲತಾಂಗಿಗಂ ಧರೆಗವಾಟಿಸಿದಂದು ನೆಗೞ್ತೆ ಮಾಸದೇ!
ಅವಧರಿಸದೆ ನಿನ್ನೊಳ್ ಪಿರಿದವಿನಯಮಂ ನೆಗೞ್ದ ದೋಷಮಂ
ತಪದೊಳ್ ನೀಗುವೆಂ!
ಅಸದಾಗ್ರಹಮಂ ಬಿಸುಡುವುದು.
ಒರ್ಮೆಗೆ ಮಱೆವುದೆನ್ನ ದುರ್ವಿಳಸನಮಂ.

[ಎಂದು ತಪಶ್ಚರಣನಿಶ್ಚಳನಿಶ್ಚಯಮನನಪ್ಪನ್.]

**ಭರತನ್**

[ಮನದೊಳ್ ಮುಂ ಪುದಿದಿರ್ದ ಕೋಪಮನಿತುಂ ತೂಳ್ದಾಗಳುಪಶಮಂ ಕೈಗಣ್ಮೆ]

ಎತ್ತೆತ್ತ ಗೆಯ್ದೆನಿದಂ ತಮ್ಮನೊಳ್! ಎತ್ತೆತ್ತ ಗೆಯ್ದೆನ್!

(ಬಾಹುಬಲಿಯ ಕಾಲ ಬಱಿ ಮಂಡಿಯೂರಿ)

ತಮ್ಮನೆ, ಪೋದರೆನ್ನನುಜರೆಲ್ಲರುಮೆಯ್ದೆ ತಪಕ್ಕೆ.
ನೀನುಮಿಂತಮ್ಮ ತಪಕ್ಕೆವೋದೊಡೆನಗೀ ಸಿರಿಯೊಪ್ಪದು. ಬೇಡ.
ನೀನೊರ್ಬನ್ನೆ. ಮನುವಂಶಕ್ಕೆ ಲಲಾಮನಪ್ಪನುಜನ್ನೆ.
ಬೇಡಮ್ಮ.
ನೀನುಂ ತಪೋವನಮಂ ಸಾರ್ವುದುಂ—
ಆನದಾರ್ಗೆ ಮೆಱೆವೆಂ ಮತ್ಪ್ರಾಜ್ಯಸಾಮ್ರಾಜ್ಯಮಂ?

**ಬಾಹುಬಲಿ**

(ಬಾಷ್ಪಪೂರಿತಲೋಚನನಪ್ಪನ್)

**ನೇಪಥ್ಯಗಾನಂ**

ನಿಜಪಾದಾಂಬುರುಹಕ್ಕೆ ಪಾದ್ಯವಿಧಿಯಂ ನೇತ್ರಾಂಬುವಿಂ ಮಾಡುವ-
ಗ್ರಜನತ್ಯುನ್ನತಮಪ್ಪ ಮಸ್ತಕದ ಮೇಗೋರಂತೆ ಪಾಯ್ವಾತ್ಮಬಾ-
ಷ್ಪಜಳೌಘಂಗಳಿನಂದು ಬಾಹುಬಲಿ ತನ್ನಿಂದಂ ನಿಧೀಶಂಗೆ ವಂ-
ಶಜರಾಜ್ಯಾಭಿಷವೋತ್ಸವಂ ನೆಗಟ್ದುದೆಂಬಾಶಂಕೆಯಂ ಮಾಡಿದಂ

**ಬಾಹುಬಲಿ**

ಏಳಣ್ಣ. ನಾನ್ ನಿಲ್ವನಲ್ಲಯ್.
ನಿನ್ನಿಚ್ಛೆಗೆವಂದೊಡೆ ಮದೀಯತನೂಜನನ್
ಮಹಾಬಲಿಯನೆನ್ನ ಪದವಿಯೊಳ್ ನಿಱಿಸು.
ನಾನ್ ತಪಕೆ ಪೋಪೆನ್. [ಅಣ್ಣನಂ ಜೀಱುಕ್ಕೊಂಡು ಪೋಪಂ.

**ನೇಪಥ್ಯಗಾನಂ**

ಕ್ಷಿತಿತಳದೊಳ್ ನೆಗಟ್ದಿರ್ದ-
ಪ್ರತಿಮಲ್ಲನನಿಕ್ಕಿ ಮುಯ್ವುಸಣಮಾನದೆ ದ-
ರ್ಪಿತದುರಿತಮಲ್ಲನುಮನುಡಿ-
ವ ತಕ್ಕಸಿಂ ಸಭೆಗೆ ನಡೆದಸಿಂದ್ರಾರ್ಚಿತನಾ

## ಐದನೆಯ ಪ್ರವೇಶಂ

[ಸಮವಸರಣಮಂಡಲಂ. ತೀರ್ಥಂಕರಸ್ವಾಮಿ, ಗಣಧರಾದಿಗಳ್]

### ನೇಪಥ್ಯಗಾನಂ

ಮಂದಾರವರ್ಷನವಮಕ-
ರಂದ ರಜೋಗಂಧಬಂಧು ವಿವಿಧಪತಾಕಾ-
ಸಂದೋಹಾಂದೋಳನಪಟು
ಬಂದಾಱಿಸಿದತ್ತು ಸಮವಸರಣಸಮೀರಂ

ದಿವಿಜನಿಕಾಯದ ಜಯಜಯ-
ರವದಿಂದಂ ದುರಿತವಿಜಯಮಂ ತಮಗೆ ಮಹೋ-
ತ್ಸವದಿನಱಿಪುತ್ತುಮಿದಿರ್ಗೊ-
ಳ್ವವೊಲೆಸೆದುದು ಸಮವಸರಣದುಂದುಭಿನಿನದಂ

### ಬಾಹುಬಲಿ

[ಭಗವದಾಸ್ಥಾನಾವನಿಂದಿನಿಯುಂ ರಾಜಹಂಸನಂತಳಂಕರಿಸುತ್ತುಂ ಬಂದು ಭಗವತ್ಪಾದಪೀಠೋಪಕಂಠದೊಳ್ ಸರ್ವಾಂಗೋಪನತನಾಗಿ ನಿಂದು ನಿಟಿಲತಟಘಟಿತ ಕರಕುಶೇಶಯಕುಟ್ಮಲನಾಗಿ]

ಜಯ ಜಿತವೃಜಿನ ಜಿನೇಶ್ವರ
ದಯಾನದೀಪುಳಿನರಾಜಹಂಸ ಭವಾಂಭೋ
ಧಿಯ ತಡಿಯನೆಯ್ದಿಸೆಮ್ಮಂ
ನಯ ನಿಕ್ಷೇಪ ಪ್ರಮಾಣಪಾತ್ರದಿನರುಹಾ

### ನೇಪಥ್ಯಗಾನಂ

ಪುರುಪರಮೇಶ್ವರ ಮುಖಚಂ-
ದ್ರರಶ್ಮಿಯಿಂ ಚೋದ್ಯಮಿನ್ನವಿಲ್ಲೆಂಬಿನೆಗಂ
ಕರವದನಹೃದಯಕಮುಳಮೊ-
ಳೆರಡಲರ್ದುವದೊಂದು ಮುಗಿದುದಾ ಭುಜಬಲಿಯಾ

**ಬಾಹುಬಲಿ**

ಮೊದಲೊಳ್ ದೇವರ ದಯೆಗೆಯ್ದುದಲ್ತೆ ಯುವರಾಜಪದವಿಯೆನಗೆ?
ಈಗಳುಮಭ್ಯುದಯಕರಪ್ರವ್ರಜ್ಯದ ಪದವಿಯ
ಯುವರಾಜಪದವಿಯಂ ದಯೆಗೆಯಿಸಿಂ.

(ಎಂದು ಆನತನಾಗಿ)

ಅಮರೇಂದ್ರೋನ್ನತಿ ಖೇಚರೇಂದ್ರವಿಭವಂ ಭೋಗೀಂದ್ರಭೋಗಂ ಮಹೇಂ-
ದ್ರಮಹೈಶ್ವರ್ಯಮಿವೆಲ್ಲಮಧ್ರುವಮಿವಂ ಬೇಡ್ಪಿಂತು ಬೆಳ್ಳಿಲ್ಲೆನು-
ತ್ತಮ ದೀಕ್ಷಾವಿಧಿಯುಂ ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾ-
ಭಮುಮೋಘಂ ದೊರೆಕೊಳ್ವುದಕ್ಕೆಮಗೆ ಮುಕ್ತಿಶ್ರೀ ಮನೋವಲ್ಲಭಾ

**ನೇಪಥ್ಯಗಾನಂ**

ಗುರುಪದಪದ್ಮಾಂತಿಕದೊಳ್
ಪರಮೇಶ್ವರದೀಕ್ಷೆಯಂ ಮನಂಬಿಡೆ ಕೊಂಡೀ-
ಧರೆಯಂ ಪೊಗಟಿಸಿದನಿದೇಂ
ಪುರುಪರಮೇಶ್ವರಸುತರ್ ಪರಿಚ್ಛೇದಿಗಳೋ

## ಆಱನೆಯ ಪ್ರವೇಶಂ

[ಬಾಹುಬಲಿಮುನಿಪನ ತಪೋಭೂಮಿ.]

### ನೇಪಥ್ಯದೊಳ್

ಅಂತು ಜೈನದೀಕ್ಷೆಯಂ ಕೈಕೊಂಡು
ಗುರುವಿನನುಮತದಿಂ ದ್ವಾದಶಾಂಗಚತುರ್ದಶಪೂರ್ವಂಗಳಂ ಕಲ್ತು
ತದನುಮತದೊಳ್ ಬೞಿಯಮೇಕವಿಹಾರಿಯಾಗಿ
ಸಂವತ್ಸರಾವಧಿವರಂ ಪ್ರತಿಮಾಯೋಗದೊಳ್ ನಿಲೆ—

ಅಡಿವಿಡಿದಿಟ್ಟ ಪುತ್ತುಗಳ ನೆತ್ತಿಗಳಿಂ ನಿಮಿರ್ದಿರ್ದ ಬಳ್ಳಿಗ-
ಳ್ವಿಡಿದು ವಿಷೋರಗಪ್ರತತಿ ನೋೞ್ಪೊಡಗುರ್ವಿಸೆ ಸುಯ್ವ ಸುಯ್ಗಳಿಂ
ಕಿಡಿ ಪೊಱಪೊಣ್ಮೆ ಬಾಹುಬಲಿಯೋಗಿಯ ಘೋರತಪೋಮಹಾಗ್ನಿಯಿಂ
ಸುಡೆ ಸುೞಿದುಣ್ಮುತಿರ್ಪ ಕಿಡಿಗಳ್ಗೆಣೆಯಾದುವು ತತ್ಪ್ರದೇಶದೊಳ್

(ಖೇಚರಿಯರಿರ್ವರ್ ಬರ್ಪರ್)

**ಖೇಚರಿ ೧**

ಕುಮಾರನ್ ಪ್ರತಿಮಾಯೋಗದೊಳ್ ನಿಂದು ಸಂವತ್ಸರಮಾದತ್ತು.

**ಖೇಚರಿ ೨**

ಆದೊಡಂ ಕೇವಲಜ್ಞಾನಾವಾಪ್ತಿಯಾಗದುದೆ ವಿಸ್ಮಯಂ!

**ಖೇಚರಿ ೧**

ಅದರ್ಕೆ ಕಾರಣಮಂ ಬೆಸಗೊಳೆ
ಭರತೇಶ್ವರನಾದಿನಾಥನೆಡೆಗೆ ಪೋಗಿರ್ಪನಲ್ತೆ?

**ಖೇಚರಿ ೨**

ಇಂದೀಗಳೆ ಬಂದಪನ್.
ಅಕ್ಕ, ಕುಮಾರನ ಅಡಿವಿಡಿದಿಟ್ಟ ಪುತ್ತುಗಳೆನಿತ್ತೊ, ಕಂಡಾ!

**ಖೇಚರಿ ೧**

ಆ ಪುತ್ತುಗಳ ನೆತ್ತಿಗಳಿಂ ನಿಮಿರ್ದಿರ್ದ ಬಳ್ಳಿಗಳೆನಿತ್ತೆನಿತ್ತೊ!

**ಖೇಚರಿ ೨**

ಆ ಬಳ್ಳಿಗಳ್ಪಿಡಿದು ಸುಯ್ವ ವಿಷೋರಗಪ್ರತತಿ ನೋಟಕ್ಕೊಡಗುರ್ವಿಸುಗುಂ!

**ಖೇಚರಿ ೧**

ಅವಱ ಸುಯ್ಗಳಿಂ ಕಿಡಿ ಪೊಱಪೊಣ್ಮೆ
ಬಾಹುಬಲಿಯೋಗಿಯ ಘೋರತಪೋಮಹಾಗ್ನಿಯ ಕಿಡಿಗಳ್ಗೆಣೆಯಾದುವು!

**ಖೇಚರಿ ೨**

ಭುಜಬಲಿಯ ಭುಜದ್ವಯದೆಡೆಯೊಳ್
ಏಂ ಭುಜಂಗನಿಶ್ವಾಸಧೂಮವೇಣೀನಿಕರಂ!

**ಖೇಚರಿ ೧**

ಬಳೆದ ಜೆಡೆ ನಿವಿರ್ದ ಬಳ್ಳಿಗಳೊಳೆ ಪೆಣೆದು
ವಿಷೋರಗಾನಳಾರ್ಚಿಗಳಿಂದಂ ವಿಳಿರ್ದುವು ಗಡ!

**ಖೇಚರಿ ೨**

ಮುನಿತನುವಂ ಸುರದ್ರುಮುಂಗೆತ್ತು
ಇರದಡರ್ವ ಲತಾಪ್ರತಾನಮುಂ ಬಿಡಿಸುವಂ, ಬಾ.

[ಪೋಗಿ ಬಿಡಿಸುವರ್. ಅಸಿತರೊಳೆ ಭರತರಾಜಂ ವಿವಿಧಾರ್ಚನಾಸಮುಗ್ರಪರಿಜನಪರಿವೃತಂ ಮುನಿರಾಜಚರಣಾಂಭೋಜದೊಳ್ ಬಂದೆಱಗಿ ವಿವಿಧಾರ್ಚನೆಗಳಿಂದ ಮರ್ಚಿಸಿ—]

**ಭರತನ್**

ಬಾಹುಬಲಿ ಮುನೀಂದ್ರ!
ವೃಷಭನಾಥನಿಂತು ಬೆಸಸಿರ್ಕುಂ :
'ತಪದೊಳ್ ನಿಂದುಂ
ನಿನ್ನ ನೆಲದೊಳ್ ನಿಂದೆನೆಂಬ ಮಾನಕಷಾಯಂ
ಅವಂಗಿನ್ನುಂ ಪತ್ತುವಿಟ್ಟುದಲ್ತು.
ಅದಱಿಂ ಕೇವಲಜ್ಞಾನೋತ್ಪತ್ತಿಯಾಗದಿರ್ದುದು.
ನೀಂ ಪೋಗಿ ಕಾಲ್ಗೆಱಗಲೊಡಂ ಕೇವಲಜ್ಞಾನಮಕ್ಕುಂ'
ಇಂತೆಂದು ಪುರುದೇವಂ ಬೆಸಸಿರ್ಕುಂ.

ಮಾನೋನ್ನತ!
ನಿನ್ನ ಮಡಗೂಲಿಕ್ಸಿಲಂ ನೀಸೀಯೆ ಬಂದುದೆನಗೆ.
ಇದನೆನೆನತೆಂದೇನ್ ನಿನಗೆ ಬಗೆಯಲಪ್ಪುದೆ?
ನಿನ್ನನೆ ನೀಂ ಬಗೆಯ! ಬಗೆಯದಿರ್ ಪೆಱಪೆಱತಂ!

ನಿನ್ನಡಿಯೆನ್ನ ಧಾತ್ರಿಯೊಳಿರ್ದಪುದೆಂಬಿದುವೇಡ.
ಧಾತ್ರಿ ತಾಂ ನಿನ್ನದುಮೆನ್ನದುಂ ಬಗೆವೊಡಲ್ಲದು; ಬೇಱದು.
ದೃಷ್ಟಿ ಬೋಧ ವೀರ್ಯಂ ಮಹಿತಾತ್ಮಧರ್ಮಂ—ಅಭವೋಕ್ತಿಯೊಳಿ.
ಭುಜಬಲಿಮುನಿಪ, ನೀಂ ಮನದ ಮಾನಕಷಾಯಮನೆಯ್ದೆ ತೊಳ್ದಿಡೈ.

ನಿಮ್ಮ ಮನಂ ನಿಜಾತ್ಮನೊಳಕಂಪಿತಮಾಗಿಡೆ ಮೋಹನೀಯಮು
ಖ್ಯಮ್ಮಣಿದೋಡಿ ಬೀಳೆ ಘನಘಾತಿಬಲಂ ಬಲದೃಕ್ಕಬೋಧ ಸೌ
ಖ್ಯಮ್ಮಹಿಮಾನ್ವಿತಂ ನೆಗಲ್ಚಿ ವರ್ತಿಸಿ ಮತ್ತಮಘಾತಿಘಾತದಿಂ
ಗೊಮ್ಮಟದೇವ ಮುಕ್ತಿಪದಮಂ ಪಡೆಯ್ಯೆ ನಿರಪಾಯಸೌಖ್ಯಮಂ

**ನೇಪಥ್ಯಗಾನಂ**

ಎನಲೊಡಮಂತಃಕರಣದೊ-
ಳಿನಿಸಾನುಂ ಸಿಂದುದೊಂದು ಮಾನಕಷಾಯಂ
ಮುನಿಪತಿಗೆ ಪೋಗೆ ಪುಟ್ಟಿದು-
ದನಂತವಸ್ತುಪ್ರಕಾಶಿಕೇವಳಬೋಧಂ

ಆಗಳ್ ದೊರೆಕೊಂಡಿರೆ ದೇ-
ದೇವಾಗಮುಮೇಕಾತಪತ್ರಮೆಸೆದಿರೆ ಕರವಿಂ-
ಬಾಗಿರೆ ಚಾಮರಯುಗ್ಮಮು-
ದಾಗಳೆ ನಿಲೆ ದಿವ್ಯವಿಷ್ಟರಂ ಮಣಿಖಚಿತಂ

ಜಯನಿನದಂ ಸುರದುಂದುಭಿ-
ಚಯನಿನದಂ ಪುಷ್ಪವರ್ಷಮೊರ್ಮೆಯೆ ಸಕಲೋ-
ರ್ವಿಯನೆಯ್ದೆ ಪರ್ವುತಿರೆ ಚಿ-
ತ್ರೀಯ ಸರಿಯಂತೆಱಗಿ ಪೋದುದಮರಸಮಾಜಂ

**ಭರತಾದಿಗಳ್**

ಅನುಪಮರೂಪನೇ ಸ್ಮರನುದಗ್ರನೆ ನಿರ್ಜಿತಚಕ್ರಿ ಮತ್ತುದಾ-
ರನೆ ನೆಜಿಗೆಲ್ದುಮಿತ್ತನಖಿಳೋರ್ವಿಯನತ್ಯಭಿಮಾನಿಯೇ ತಪಃ-
ಸ್ಥನುಮೆರಡಂಘ್ರಿಯಿತ್ತೆಳೆಯೊಳಿರ್ದಪುದೆಂಬನನೂನಬೋಧನೇ
ವಿನಿಹತಕರ್ಮಬಂಧನೆನೆ ಬಾಹುಬಳೀಶನಿದೇನುದಾತ್ತನೋ

ಅಭಿಮಾನಸ್ಥಿರಭಾವಮಂ ನಮಗೆ ಮಾಳ್ಕುತ್ಯುದ್ಧ ಮಾನೋನ್ನತಂ
ಶುಭಸೌಭಾಗ್ಯಮನಂಗಜಂ ಭುಜಬಲಾವಷ್ಟಂಭಮಂ ಚಕ್ರವ-
ರ್ತಿಭುಜಾದರ್ಪವಿಳೋಪಿ ಬಾಹುಬಲಿ ತೃಷ್ಣಾಚ್ಛೇದಮಂ ಮುಕ್ತರಾ-
ಜ್ಯಭರಂ ಮುಕ್ತಿಯನಾಪ್ತನಿರ್ವೃತಿಪದಂ ಶ್ರೀಗೋಮಟೇಶಂ ಜಿನಂ

[ಇದು **ಭರತವಾಕ್ಯಂ**]

## ಆಕರಗಳು

ಪಂಪ—ಆದಿಪುರಾಣ, ಮುಖ್ಯವಾಗಿ ಆಶ್ವಾಸ 14.
ಬೊಪ್ಪಣ—ಜಿನಸ್ತುತಿ, ಶ್ರವಣ ಬೆಳ್ಗೊಳದ ಶಾಸನ 234.
ಚಾವುಂಡರಾಯ—ಚಾವುಂಡರಾಯಪುರಾಣ.
ನಾಗಚಂದ್ರ—ಮಲ್ಲಿನಾಥಪುರಾಣ.

**ಪ್ರಸ್ತಾವನೆ:** 'ಶ್ರೀವೃಷಭ'—ಚಾವುಂಡರಾಯ. 'ಶ್ರೀ ದೇವೇಂದ್ರ'—ಪಂಪ. 'ಶ್ರೀ ಗೊಮ್ಮಟ, ಕ್ರಮದಿಂ'—ಬೊಪ್ಪಣ. 'ಅಱುವತ್ತು, ಹತವೈರಿ'—ಪಂಪ.

**ಪ್ರವೇಶ ೧ ರಿಂದ ೬:** ಆದಿಪುರಾಣ, ಆಶ್ವಾಸ 14.

**ಪ್ರವೇಶ ೪, ಪುಟ ೪೩:** 'ತಮ್ಮನೆ . . . ನೀನುಮಿಂತಮ್ಮ'—ಈ ಎರಡು ಪಂಕ್ತಿ ಬೊಪ್ಪಣನವು.

**ಪ್ರವೇಶ ೫, ಪುಟ ೪೪:** 'ಜಯ ಜಿತವೃಜಿನ'—ನಾಗಚಂದ್ರ.

**ಪ್ರವೇಶ ೫, ಪುಟ ೪೫:** 'ಅಮರೇಂದ್ರ'—ಪಂಪ, ಆಶ್ವಾಸ 10.

**ಪ್ರವೇಶ ೬, ಪುಟ ೪೮-೪೯:** 'ನಿನ್ನಡಿ, ನಿಮ್ಮಮನಂ, ಅನುಪಮ, ಅಭಿಮಾನ'—ಬೊಪ್ಪಣ.

## ಪಾತ್ರಗಳು

ಸೂತ್ರಧಾರ

ನೇಪಥ್ಯಗಾಯಕರು

ಚಾವುಂಡರಾಯ

ಕಾಳಲದೇವಿ

ಆಚಾರ್ಯ ನೇಮಿಚಂದ್ರ

ವಂದಿಗಳು

ಪೌರಾಣಿಕ

ಯಕ್ಷಿಯರು

ಕವಿರತ್ನ

ಅತ್ತಿಮಬ್ಬೆ

ಆಚಾರ್ಯ ಅಜಿತಸೇನ

ಭರತ

ಬಾಹುಬಲಿ

ಚಾವುಂಡರಾಯನ ಹೆಂಡತಿ, ಮಗ

ಹಲವರು ವೀರರು, ಹಲವರು ಯಾತ್ರಿಕರು

ಕಾಮಾಟಿಗಳು, ಕಲ್ಕುಟಿಗರು

4805

# ಶ್ರೀ ಗೋಮಟ ಶಿಲ್ಪ

---

## ಪ್ರಸ್ತಾವನೆ

**ಸೂತ್ರಧಾರ**

ಶ್ರೀಸುರನರಲೋಕೈಕ ಜಯಸ್ತಂಭ
ಭಾಸುರ ಸುಜ್ಞಾನದೀಪ
ಮಾಸದ ಮಹಿಮ ಬೆಳ್ಗುಳದ ಗೋಮಟ ಜಿನ್
ಲೇಸಿತ್ತು ಸಲಹು ಸರ್ವರನು

ಎಲ್ಲ ದೇವರಿಗೆ ನೀನಗ್ಗಳನೆಂಬುದ
ಸೊಲ್ಲಿಸುತಿದೆ ದಿವ್ಯದೇಹ
ಬಲ್ಲಿದ ಗುಮ್ಮಟಸ್ವಾಮಿ ನಿನ್ನಯ ಪಾದ-
ಪಲ್ಲವಕಾನೆರಗುವೆನು

ಕಾಯಜನಾಗಿ ಕಾಯಜನ ಗೆಲಿದು ಮುಕ್ತಿ-
ನಾಯಕಿಗರಸಾದಭವಾ
ಹೇಯಾದೇಯತತ್ತ್ವಗಳ ತಿಳುಹಿ ನಮ್ಮ
ಕಾಯೊ ಶ್ರೀಗೊಮ್ಮಟಜಿನಪ

ಆರ್ಯಮಹಾಶಯರಲ್ಲಿ ವಿಜ್ಞಾಪನೆ. ಶ್ರವಣಬೆಳ್ಗೊಳಕ್ಷೇತ್ರದಲ್ಲಿ ವಿರಾಜಮಾನವಾಗಿರುವ ಶ್ರೀ ಗೋಮಟೇಶ್ವರ ಸ್ವಾಮಿಯ ಬಿಂಬದ ರಚನೆಯನ್ನು ಕುರಿತು, ನಮ್ಮ ಪೂರ್ವಕವಿಗಳ ಪದ್ಯಗಳ ಪವಣಿಕೆಯಿಂದ, ಒಂದು ಧಾರ್ಮಿಕ ದೃಶ್ಯಾವಲಿಯನ್ನು ನಾವು ಪ್ರಕೃತದಲ್ಲಿ ಆಡುವವರಾಗಿದ್ದೇವೆ. ರಸಗ್ರಾಹಿಗಳಾದ ಭವ್ಯರಿಗೆ ಇದು ಪುಣ್ಯಾಸ್ರವಕಾರಣವಾಗಲಿ.

ಕೆಮ್ಮಗಿದೇಕೆ ನಾಡ ಪಲವಂದದ ನಂದಿದ ಬಿಂದಿಗರ್ಕಳಂ
ನೀಮ್ಮರುಳಾಗಿ ದೇವರಿವರೆಂದವರಂ ಮತಿಗೆಟ್ಟು ನಿನ್ನನೇ
ಕಮ್ಮ ತೊಳಲ್ಚಿದಪ್ಪೆ ಭವಕಾನನದೊಳ್ ಪರಮಾತ್ಮರೂಪನಂ
ಗೊಮ್ಮಟದೇವನಂ ನೆನೆಯ ನೀಗುವೆ ಜಾತಿಜರಾದಿದುಃಖಮಂ

ಶ್ರೀ ಗೊಮ್ಮಟಜಿನನಂ ನರ-
ನಾಗಾಮರ ದಿತಿಜ ಖಚರಪತಿ ಪೂಜಿತನಂ
ಯೋಗಾಗ್ನಿ ಹತಸ್ಮರನಂ
ಯೋಗಿಧ್ಯೇಯನನಮೇಯನಂ ಸ್ತುತಿಯಿಸುವೆಂ

ಮನದಿಂ ನುಡಿಯಿಂ ತನುವಿಂ-
ದೆನಸುಂ ಮುನ್ನೆ ಜಪಿದಘಮನಲರಿಪೆನೆಂಬೀ
ಮನದಿಂದವೊಸೆದು ಗೊಮ್ಮಟ-
ಜಿನನಂ ಸ್ತುತಿಯಿಸಿದನಿಂತು ಸುಜನೋತ್ತಸಂ

[ಇದು ಪ್ರಸ್ತಾವನೆ]

## ಮೊದಲನೆಯ ಪ್ರವೇಶ

### ನೇಪಥ್ಯಗಾನ

[ತೆಂಗು, ತಾಳೆ, ಬಾಳೆ, ಕಬ್ಬು, ಹಲಸು ಮೊದಲಾದ ವೃಕ್ಷಗಳು.]

ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾಱನಾ
ನೆಲನಂ ಮತ್ತಿನ ಮಾನಿಸರ್ ಪೊಗೞಲೇನಂ ಬಲ್ಲರೆಂಬೊಂದು ಬ-
ಲ್ಲುಲಿಯಂ ನೆಟ್ಟನೆ ತಾಳ್ದು ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು ಮೆ-
ಲ್ಲೆಲರಿಂ ಪೂತ ಕೊಳಂಗಳಿಂ ಕೆಱೆಗಳಿಂ ಕಾಲೂರ್ಗಳಿಂ ಕೆಯ್ಗಳಿಂ

[ನಗರದಲ್ಲಿ ನಾನಾ ತೆರದ ಗೋಪುರಗಳ ಪ್ರಾಸಾದಗಳು.]

ಸುರುಚಿರ ಕರ್ಣಾಟದೇಶವಿಂತಿರಲಿತ್ತೀ
ವರಪಾಂಡುದೇಶದೊಳತ್ತ
ಸುರರ ನಗರದೊಲು ದಕ್ಷಿಣ ಮಧುರಾ-
ಪುರಿ ಪರಮೈಶ್ವರ್ಯದಿಂದೆ

[ರಾಜ ರಾಚಮಲ್ಲ—ಸರ್ವಾಧ್ಯಕ್ಷ ಚಾವುಂಡರಾಯ.]

ಇಂತಪ್ಪ ಮಧುರೆಯರಸು ರಾಚಮಲ್ಲನ-
ನಂತವೈಭವಸಮುಪೇತ
ಕಾಂತಾಜನಕಾಮು ಗಂಗಕುಲೋದ್ಭವ
ಚಿಂತಾಮಣಿ ಸರ್ವಜನಕೆ

ಅವನ ದ್ವಿತೀಯವೈಭವ ಸರ್ವಾಧ್ಯಕ್ಷ
ಭುವನಾಶ್ಚರ್ಯಸಂಪದನು
ತವೆ ಜಿನಪದಭಕ್ತ ಚಾವುಂಡರಾಯ ಸತ್-
ಕವಿಕುಲಕಮಲಮಾರ್ತಾಂಡಾ

[ಚಾವುಂಡರಾಯನಿಗೂ ಹಲವರು ವೀರರಿಗೂ ಕಾಳಗ. ಚಾವುಂಡರಾಯನಿಂದ ಅವರ ಸಂಹಾರ.]

ಚಂಡಪ್ರತಾಪರೂರ್ಜಿತ-
ಮಂಡಲರಪ್ರತಿಮತೇಜರೆಂದೆಂದೆ ಭಯಂ-
ಗೊಂಡೆಱಗುಗುಂ ಜನಂ ಮಾ-
ರ್ತಾಂಡಂಗಂ ನೆಗೞ್ದ ವೀರಮಾರ್ತಾಂಡಂಗಂ

ಸುರಶೈಲಂ ಪಿರಿದಲ್ತು ವಾರ್ಧಿ ಪಿರಿದಲ್ತಾಮೇರುಗಂ ವಾರ್ಧಿಗಂ
ಪಿರಿದುರ್ವೀತಳಮಲ್ತು ಮೇರುಗಿರಿಗಂ ವಾರಾಶಿಗಂ ಧಾತ್ರಿಗಂ
ಪಿರಿದಾಕಾಶಾಂತರಮಲ್ತು ಮಂದರಸಮುದ್ರೋರ್ವೀದಿಗಂತಂಗಳಿಂ
ಪಿರಿದುಗ್ರಾರಿಜಯಾರ್ಜಿತೋರ್ಜಿತಯಶಂ ಶ್ರೀವೀರಮಾರ್ತಾಂಡನಾ

ಚಲದಿಂ ರಾಜಾದಿತ್ಯನಂ ತಳ್ತಿಱಿದ ಭುಜಬಲಂ ರಾಚನಂ ಕೊಂದ ವೀರಂ
ನೆಲದಿಂದಂ ತಾಗೆ ಗೋವಿಂದರಸನಿರದೆ ಬೆಂಕೊಂಡ ಬಲ್ಲಾಳ್ತನಂ ಮಂ-
ಡಲರಾಜ್ಯಾಸಕ್ತನಂ ರಾಚಯನನಧಿಕನಂ ಪಾಱಯೋಳ್ ಕೊಂದ ಶೌರ್ಯಂ
ಪಲಗಾರ್ಶ್ಚರ್ಯಪ್ರತಾಪೋನ್ನತನೆನೆ ನೆಗೞ್ದಂ ವೀರಮಾರ್ತಾಂಡದೇವಂ

[ಜಿನಮೂರ್ತಿಯ ಎದುರಿಗೆ ಚಾವುಂಡರಾಯ, ಆತನ ತಾಯಿ, ಹೆಂಡತಿ, ಮಗ, ಆತನ ಕುಲಗುರು ನೇಮಿಚಂದ್ರಾಚಾರ್ಯ.]

ಧೀರನುದಾರ ಸಚ್ಚರಿತ ಸಜ್ಜನತಾ-
ಧಾರ ಸನ್ಮಾರ್ಗವಿಚಾರ
ಪಾರಾವಾರಗಂಭೀರನರಿವನಕು-
ಠಾರ ಯಶೋವಿಸ್ತಾರ

ಚಿತ್ರಜಸಮರೂಪ ಚಾವುಂಡರಾಯ ಕ-
ಲತ್ರ ಸುಪುತ್ರ ಸನ್ಮಿತ್ರ-
ರರ್ಥಿಯಿಂ ಧರ್ಮಾರ್ಥಕಾಮುವ ಸಮಗಂಡು
ವರ್ತಿಸುತಿರೆ ಪೂರ್ವದೊಳು

## ಎರಡನೆಯ ಪ್ರವೇಶ

[ಚಾವುಂಡರಾಯನ ಸಭಾಸ್ಥಾನ. ಎರಡೂ ಪಾರ್ಶ್ವಗಳಲ್ಲಿ ವಂದಿಗಳು.]

**ವಂದಿಗಳು**

ಬ್ರಹ್ಮಕ್ಷತ್ರಕುಳೋದಯಾಚಳಶಿರೋಭೂಷಾಮಣಿರ್ಭಾನುಮಾನ್
ಬ್ರಹ್ಮಕ್ಷತ್ರಕುಳಾಬ್ಧಿವರ್ಧನಯಶೋರೋಚಿಸ್ಸುಧಾದೀಧಿತಿಃ
ಬ್ರಹ್ಮಕ್ಷತ್ರಕುಳಾಕರಾಚಳಭವಶ್ರೀಹಾರವಲ್ಲೀಮಣಿಃ
ಬ್ರಹ್ಮಕ್ಷತ್ರಕುಳಾಗ್ನಿಚಂಡಪವನಶ್ಚಾವುಂಡರಾಜೋ ಜನಿ

ಆಳ್ದನ ಬೆಸದಿಂ ಖೇಡಗ ಕಾಳೆಗದೊಳ್
ವಜ್ಜಳದೇವನಂ ಗೆಲ್ದ ಸಾಹಸದಿಂ ಸಮರಧುರಂಧರಂ—
ಗೋನೂರ ಬಯಲೊಳ್ ಬಂದೊಡ್ಡಿದ ನೊಳಂಬರ ಕಾಳೆಗದೊಳ್
ಜಗದೇಕವೀರನ ಮುಂತೆ ತನ್ನ ಬಲಮಂ ಮೆಱೆದುದಱಿಂ ವೀರಮಾರ್ತಾಂಡಂ
ಉಚ್ಚಂಗಿಯ ಕೋಟೆಯೊಳ್ ರಾಜಾದಿತ್ಯನೊಳ್
ಒರ್ವನೆ ರಣಮಂ ಮೆಱೆದುದಱಿಂದೆ ರಣರಂಗಸಿಂಗಂ—
ಬಾಯಿಲೂರ ಕೋಟೆಯೊಳ್ ತ್ರಿಭುವನವೀರನಂ ಕೊಂದು
ಗೋವಿಂದರಸಂ ಪುಗಿಸಿದುದಱಿಂ ವೈರಿಕುಲಕಾಲದಂಡಂ—
ನೃಪಕಾಮನ ಕೋಟೆಯೊಳ್ ರಾಜ ಬಾಸ ಸಿವರ ಕೂಣಾಂಕ ಮೊದಲಾದ
ಕಲಿಗಳನೊಂದೆ ಮೆಯ್ಯೊಳ್ ಪೆಣೆದಿಱಿದುದಱಿಂ ಭುಜವಿಕ್ರಮಂ—
ತನ್ನ ತಮ್ಮನಂ ನಾಗವರ್ಮನಂ ಕೊಂದ ಪಗೆಗೆ ಚಲದಂಕಗಂಗಂ—
ಗಂಗರ ಭಟನೆನಿಸಿದ ಮುದುರಾಚಯನಂ ಕೊಂದುದಱಿಂ
ಸಮರಪರಶುರಾಮಂ—
ಜಟ್ಟಿಗರಸಟ್ಟಿದ ದಂಡಿನೊಳೆ ನಿಷ್ಕಂಟಕಂ ಮಾಡಿದುದಱಿಂ
ಪ್ರತಿಪಕ್ಷರಾಕ್ಷಸಂ—
ವೀರಭಟಕೋಟೆಯುಂ ತವೆ ಕೊಂದುದಱಿಂ ಭಟಮಾರಿ—
ನಿಶ್ಶಂಕಾದಿ ಗುಣಪರಿರಕ್ಷಣೈಕಕಾರಣನಪ್ಪುದಱಿಂ ಗುಣಮಂ ಕಾವಂ—
ಸತ್ಯತ್ಯಾಗಾದಿಸಮನ್ವಿತನಪ್ಪುದಱಿಂ ಸಮ್ಯಕ್ತ್ವರತ್ನಾಕರಂ—

ಪರಾಂಗನಾ ಪರದ್ರವ್ಯ ಪರಾಙ್ಮುಖನಪ್ಪುದಱಿಂ ಶೌಚಾಭರಣಂ—
ಪರಿಹಾಸದೊಳಂ ಸೂನೃತವಚನನಪ್ಪುದಱಿಂ ಸತ್ಯಯುಧಿಷ್ಠಿರಂ—
ಅತಿಪ್ರಚಂಡವೀರಮಾಂಡಲಿಕಶಿಖಂಡಮುಂಡನಮಣಿಯಪ್ಪುದಱಿಂ
ಸುಭಟಚೂಡಾಮಣಿ—
ಎನಿಸಿದ ಚಾವುಂಡರಾಯ ಮಹಾಸರ್ವಾಧ್ಯಕ್ಷರಿಗೆ ಜಯಜಯಾ!
ಸಮ್ಯಕ್ತ್ವಚೂಡಾಮಣಿಗೆ ಜಯಜಯಾ!
ವೀರಮಾರ್ತಾಂಡಂಗೆ ಜಯಜಯಾ!

[ಮೇಲಿನ ಘೋಷಣೆ ನಡೆಯುತ್ತಿರುವಾಗಲೆ ಕ್ರಮವಾಗಿ ಸಭಿಕರು, ಚಾವುಂಡರಾಯನ ತಾಯಿ ಹೆಂಡತಿ ಮಕ್ಕಳು, ಬಂದು ಕುಳ್ಳಿರುವರು. ಅನಂತರ ಪೌರಾಣಿಕನು ವ್ಯಾಸಪೀಠದ ಮುಂದೆ. ಕಡೆಗೆ ಜಯಜಯಕಾರವಾಗುವಾಗ ಚಾವುಂಡರಾಯನು ಬಂದು ಪೀಠದಲ್ಲಿ ಕುಳಿತ ಕೂಡಲೆ ಪುರಾಣ ಆರಂಭವಾಗುವುದು.]

**ಪೌರಾಣಿಕ**

ಶ್ರೀಮತ್ಪರಮಗಂಭೀರಸ್ಯಾದ್ವಾದಾಮೋಘಲಾಂಛನಮ್
ಜೀಯಾತ್ ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಮ್

ಭದ್ರಂ ಭೂಯಾತ್ ಜಿನೇಂದ್ರಾಣಾಂ ಶಾಸನಾಯಾಘನಾಶಿನೇ
ಕುತೀರ್ಥಧ್ವಾಂತಸಂಘಾತಪ್ರಭಿನ್ನಘನಭಾನವೇ

[ಚಕ್ರ ಬಂದು ನಗರದ ಹೊರಗೆ ನಿಲ್ಲುವುದು. ಮಂತ್ರಾಲೋಚನೆ.]

ಪುರುದೇವ ಸಮವಸರಣದೊಳೊಪ್ಪಿರುತಿರೆ
ಭರತೇಶ ಷಟ್ಖಂಡವನು
ಯಿರದೆ ಬಾಯ್ಕೇಳಿಸಿಯಭ್ಯುದಯವನಾಂತು
ತಿರುಗಿ ಪುರವ ಪುಗುವಾಗ

ಪಾರುಂಬಳೆ ಪೋಗದಿರೆ ಚಕ್ರಿ ಮಿತ್ರರ-
ನಾರೈದು ಕಿರಿಕೇಳಿದೊಡೆ
ಮಾರಕುಮಾರನೆರಗಬೇಕೆನೆ ಮಂತ್ರಿ
ಸಾರಾತ್ಮರನು ಕಳುಹಿಸಲು

[ಬಾಹುಬಲಿ ಭರತನನ್ನು ಸೋಲಿಸುವನು. ಭರತನು ಚಕ್ರವನ್ನು ಎಸೆಯುವನು. ಅದು ಭುಜಬಲಿಗೆ ಪ್ರದಕ್ಷಿಣೆ ಮಾಡುವುದು. ತಮ್ಮನು ತಪಸ್ಸಿಗೆ ತೆರಳುವನು. ಅಣ್ಣನ ಪಶ್ಚಾತ್ತಾಪ.]

ಅವರೆಯ್ದಿ ಬಾಹುಬಲೀಶನಿಗೊಂದಿಸಿ
ವಿವರಗಾಣಿಸೆ ಮುಳಿಸೊಗೆದು
ಬವರದೊಳಣ್ಣನ ಪಿಡಿದು ತಿರುಹಿಬಿಟ್ಟ-
ನವನೇನು ಸತ್ತ್ವಸಂಯುತನೊ

ಮುಳಿದು ಚಕ್ರದಿ ಚಕ್ರಿಯಿಡೆ ಭುಜಬಲಿಯನು
ಬಲವಂದು ಭುಜ ಬಲಿಯಿಸಲು
ತಳರ್ದೆಡೆಯಾಡಲಡಿಯೊಳೊದೆದನು ಚಕ್ರ-
ದಳವು ಪಿಂಗಿತು ಕಾಲವಶದಿ

ಭರತೇಶ ಕಳೆಗುಂದಿರೆ ನೋಡಿ ಪುಷ್ಪಾಸ್ತ್ರ
ಸ್ಥಿರವಲ್ಲ ಸಿರಿ ಧರೆ ದೇಹ
ಮರುಳಾಟವೀ ಧರೆ ಸಿರಿ ನಿನಗಿರಲೆಂ-
ದೊರೆದು ತಪಕೆ ಪೋಪಾಗ

ತೆರಳ್ದೆಯಾದೊಡೆ ತಮ್ಮ ಸಿರಿಯೆನಗೊಪ್ಪದೆಂ-
ದೊರೆವಗ್ರಜನಿಗೆಡೆಗುಡದೆ
ಒರಲುವ ಸತಿಯರುಲುಹನಾದರಿಸದೆ
ತೆರಳಿ ತಪದಿ ನಿಂದನೊಡನೆ

ಸಿರಿ ಸತ್ತ್ವ ರೂಪ ಯೌವನ ರಾಜ್ಯಪದವಿರ್ದು
ಪುರುದೇವ ಸುತ ತಾನಾಗಿ
ಧರೆ ತೃಣಗಂಡು ಬಿಸುಟು ದೀಕ್ಷೆದಳೆದನು
ನರನಾವ ಸಿರಿಗೆ ಹಿಗ್ಗುವುದೂ

[ತಪಸ್ಸಿಗೆ ನಿಂತ ಬಾಹುಬಲಿಯ ಸುತ್ತ ಗಿಡ ಬಳ್ಳಿ ಹುತ್ತ ಬೆಳೆದುಕೊಳ್ಳುವುವು.]

ಎಮ್ಮನಿದೇಕೆ ನೀಂ ಬಿಸುಟೆಯೆಂದೆಳೆಯುಂ ಲತಿಕಾಂಗಿಯರ್ಕಳುಂ
ತಮ್ಮಳಲಿಂದೆ ಬಂದು ಬಿಗಿಯಪ್ಪಿದರೆಂಬಿನಮುಂಗದಲ್ಲಿ ಪು-
ತ್ತುಮ್ಮರಿದೊತ್ತಿ ತಳ್ತ ಲತಿಕಾಳಿಯುವೊಪ್ಪೆ ತಪೋನಿಯೋಗದೊಳ್
ಗೊಮ್ಮಟದೇವನಿರ್ದಿರವಹೀಂದ್ರಸುರೇಂದ್ರಮುನೀಂದ್ರವಂದಿತಂ

[ಭರತನು ಬಂದು ಬೋಧಿಸುವನು. ಗಿಡ ಬಳ್ಳಿ ಹುತ್ತ ಕಳಚಿಬೀಳುವುದು. ಮಹಾಪ್ರಕಾಶ ಮೈದೋರುವುದು. ಮಂಗಳವಾದ್ಯಗಳಾಗುವುವು. ಜಯಜಯ ಕಾರಗಳು ಕೇಳುವುವು.]

ಅರಿದಾ ಚಕ್ರಿ ಸಮವಸರಣವನೈದಿ
ಪರಮಗೊಂದಿಸಿಯನುಜನಿಗೆ
ಪೊರಪೊಣ್ಮದಿದೆ ಜ್ಞಾನ ಕಾರಣಮೆನೆ ಕ್ಲೇಶ-
ವಿರುತಿದೆ ಬೋಧಿಸೆಂದೆನಲು

ಬಂದು ವಂದಿಸಿ ಪಲವಂದದಿ ಬೋಧಿಸಿ
ಯಿಂದು ನೀನೆಲ್ಲವ ತೊರೆದು
ವಂದಿತಗುರುವಾದೆ ಬಿಡದೆ ನಾ ಲಘುವಾದೆ-
ನೆಂದೆನೆ ಕ್ಲೇಶ ಜಾರಿದುದು

ಜರಿಯಲು ಕ್ಲೇಶಮಾವರಣ ಪಿಂಗಿದ ಸೂರ್ಯ-
ನಿರಲು ಕಾಣಿಸೆ ಸುಜ್ಞಾನ
ಸುರರು ನೆರೆದು ಪೂಜಿಸಿ ಗಂಧಕುಟಿಸಗ್ಗ-
ದೆರೆಯನಾದನು ಗೋಮಟೇಶ

ಕ್ರಮದಿಂ ಮೆಯ್ವೊಣರ್ದಾಜಿವಕ್ರಮದೆ ಮಾತಂಬಿಟ್ಟು ತನ್ನಿಟ್ಟ ಚ-
ಕ್ರಮದುಂ ನಿಃಪ್ರಭಮಾಗೆ ಸಿಗ್ಗನೊಳಕೊಂಡಾತ್ಮಾಗ್ರಜಂಗೊಳ್ಪಗೆ-
ಯ್ದು ಮಹೀರಾಜ್ಯಮನಿತ್ತು ಪೋಗಿ ತಪದಿಂ ಕರ್ಮಾರಿವಿಧ್ವಂಸಿಯಾ-
ದ ಮಹಾತ್ಮಂ ಪುರುಸೂನು ಬಾಹುಬಲಿವೊಲ್ ಮತ್ತಾರೊ ಮಾನೋನ್ನತರ್

[ಬಾಹುಬಲಿ ತೆರಳುವನು. ಭರತಾದಿಗಳೂ ತೆರಳುವರು.]

ಭರತೇಶ ಪೂಜಿಸಿ ಪುರವೊಕ್ಕು ಸುಖದೊಳ-
ಗಿರೆ ಗಂಧಕುಟಿವಿಹರಣದಿ
ಪರಮಧರ್ಮಾಮೃತವೆರೆದು ವಿಸರ್ಜಿಸಿ
ಕರುಮಕ್ಷಯದಿ ಮುಕ್ತಿವಡೆದ

[ಭರತನು ನಿಂತು, ಬಾಹುಬಲಿಯ ಆಕೃತಿಯ ವಿಗ್ರಹವನ್ನು ಮಾಡಿಸುವನು.]

ನಿರ್ವಾಣಪೂಜೆಯ ಮಾಡಿ ಸುರರು ಸು-
ಪರ್ವಲೋಕಕೆ ಪೋಗಲೊಡನೆ
ಕರ್ವುವಿಲ್ಲನ ಪ್ರತಿಕೃತಿಯನುತ್ಪಾದನ-
ದುರ್ವಿಯೊಳ್ ಚಕ್ರಿ ಮಾಡಿಸಿದ

ಧೃತಜಯಬಾಹು ಬಾಹುಬಳಿಕೇವಳಿರೂಪಸಮಾನ ಪಂಚವಿಂ-
ಶತಿಸಮುಪೇತ ಪಂಚಶತಚಾಪಸಮುನ್ನತಿಯುಕ್ತಮಪ್ಪ ತತ್-
ಪ್ರತಿಕೃತಿಯಂ ಮನೋಮುದದೆ ಮಾಡಿಸಿದಂ ಭರತಂ ಜಿತಾಖಿಳ-
ಕ್ಷಿತಿಪತಿ ಚಕ್ರಿ ಪೌದನಪುರಾಂತಿಕದೊಳ್ ಪುರುದೇವನಂದನಂ

ಮರಕತದಿಂದ ಸಮೆದ ದಿವ್ಯದೇಹವ
ನಿರವಿಸಿ ಭರತಚಕ್ರೇಶ
ಪರಮೋತ್ಸವದಿಂದಭಿಷವಣವ ಮಾಡೆ
ಸುರರು ಸೂಸಿದರಲರ್ಮಳೆಯ

[ಹೂವಿನ ಮಳೆ, ದುಂದುಭಿ ಮೊದಲಾದ ವಾದ್ಯಗಳು, ದೀಪಾರತಿಗಳು.]

ಮುತ್ತು ವಜ್ರದ ಬೆಳ್ಸರಿ ಸೂಸೆ ಮಾಣಿಕ್ಯ
ರತ್ನದ ವರ್ಷವಾಗುತಿರೆ
ಮತ್ತೆ ವಿದ್ರುಮ ನೀಲ ಪಚ್ಚೆ ವೈಡೂರ್ಯದೊಂ-
ದುತ್ತಮ ಜಡಿ ಕಾರಿದುದು

ಗೋಮೇಧಿಕ ಪುಷ್ಯರಾಗದ ಹನಿ ಬೀಳೆ
ವ್ಯೋಮದಿ ಸುರರು ಕೊಂಡಾಡೆ

ತಾ ವೊಳಗಲು ದೇವದುಂದುಭಿಗಳು ದಿ-
ವ್ಯಾವೋದದಲರು ತೀಡಿದುದು

[ವಿಗ್ರಹದ ಸುತ್ತ ಗಿಡ ಬಳ್ಳಿ ಸುತ್ತ ಬೆಳೆಯುತ್ತದೆ. ಕುಕ್ಕುಟಸರ್ಪಗಳು ಕಾಣಿಸಿಕೊಳ್ಳುತ್ತವೆ. ದೇವದುಂದುಭಿ ಕೇಳುತ್ತದೆ. ದೀಪಾರತಿ ಬೆಳಗುತ್ತದೆ.]

ಚಿರಕಾಲಂ ಸಲೆ ತಜ್ಜಿನಾಂತಿಕಧರಿತ್ರೀದೇಶದೊಳ್ ಲೋಕಭೀ-
ಕರಣಂ ಕುಕ್ಕುಟಸರ್ಪಸಂಕುಳಮಸಂಖ್ಯಂ ಪುಟ್ಟಿ ದಲ್ ಕುಕ್ಕುಟೇ-
ಶ್ವರನಾಮಂ ತದಘಾರಿಗಾದುದು ಬಟಿಕ್ಕಂ ಪ್ರಾಕೃತರ್ಗಾಯ್ತುಗೋ-
ಚರಮನ್ತಾಮಹಿಮಂತ್ರತಂತ್ರನಿಯತರ್ ಕಾಣ್ಬರ್ಗಡಿನ್ನುಂ ಪಲರ್

ಕೇಳಲ್ಕಪ್ಪುದು ದೇವದುಂದುಭಿರವಂ ಮಾತೇನೊ ದಿವ್ಯಾರ್ಚನಾ-
ಜಾಳಂ ಕಾಣಲುಮಪ್ಪುದಾ ಜಿನನ ಪಾದೋದ್ಯನ್ನ ಖಪ್ರಸ್ಫುರ-
ಲ್ಲೀಲಾದರ್ಪಣಮಂ ನಿರೀಕ್ಷಿಸಿದವರ್ಕಾಣ್ಬರ್ನಿಜಾತೀತ ಜ-
ನ್ಮಾಳಂಬಾಕೃತಿಯಂ ಮಹಾತಿಶಯಮಾದೇವಂಗಿಳಾವಿಶ್ರುತಂ

## ಮೂರನೆಯ ಪ್ರವೇಶ

### ನೇಪಥ್ಯಗಾನ

ಜನದಿಂ ತಜ್ಜಿನವಿಶ್ರುತಾತಿಶಯಮಂ ತಾಂ ಕೇಳ್ದು ನೋಳ್ಪಲ್ತಿ ಚೇ-
ತನೆಯೊಳ್ ಪುಟ್ಟಿರೆ ಪೋಗಲುದ್ಯಮಿಸೆ ದೂರಂ ದುರ್ಗಮಂ ತತ್ಪುರಾ-
ವನಿಯೆಂದಾರ್ಯಜನಂ ಪ್ರಬೋಧಿಸಿದೊಡಂತಾದಂದು ತದ್ದೇವ ಕ-
ಲ್ಪನೆಯಿಂ ಮಾಡಿಪೆನೆಂದು ಮಾಡಿಸಿದನಿಂತೀ ದೇವನಂ ಗೋಮಟಂ

[ಜಿನಬಿಂಬದ ಮುಂದೆ ಚಾವುಂಡರಾಯನ ತಾಯಿ. ಚಾವುಂಡರಾಯನ ಪ್ರಶ್ನೆ. ತಾಯಿಯ ಬಯಕೆ. ಚಾವುಂಡರಾಯನ ವಾಗ್ದಾನ. ಪ್ರಯಾಣ. ಭೇರೀನಿನಾದ.]

ತತ್ಕಥೆಗೇಳ್ದು ಚಾವುಂಡರಾಯನ ಮಾತೆ
ಮತ್ತಾ ಜಿನನ ನೋಳ್ಪರ್ತಿ-
ವೆತ್ತು ನಿಟ್ಟಿಸುವನ್ನ ಮಧುರಾಹಾರವ
ತುತ್ತೆತ್ತೆನೆಂದಿರುತಿರ್ದು

ಸರಸಿಯನಂಚೆ ತಿಂಗಳನಬ್ಧಿ ತಾನನು-
ಸರಿಸುವಂತಲರನು ತುಂಬಿ
ಪರಪುಟ್ಟನಾವಗಮಾಮ್ರವನವನೆಂತು
ಸ್ಮರಿಸುತಿರಲ್ಕಂತೆ ಜಿನನ



ತಿಳಿದು ಮಾತೆಯ ಮನದೊಳಗಿರ್ದಭೀಷ್ಟವ
ಸಲಿಸುವೆನೆಂದು ಸಂತೈಸಿ
ತಳರಲೆಳಸಿದನು ಪೌದನಪುರಿಗಾ-
ಯಿಳೆಯಾಣ್ಮ ಜನನಿಸಮೇತ

ದೊರೆಗಳ ಕರೆಸಿ ಮಂತ್ರಿಗಳಿಗೆ ಹೇಳಿಸಿ
ಪರಿವಾರ ಜನಗಳ ಬರಸಿ
ಅರುಹಿ ಬಂಧುಗಳಿಗೆ ಪಯಣವ ನಿಶ್ಚೈಸಿ
ತೆರಳಿದ ಭೇರಿಯ ಪೊಯ್ಸಿ

[ಮಾರ್ಗ, ಗಾಡಿಗಳು, ಗುಡಾರಗಳು. ಜನಗಳ ಓಡಾಟ.]

ಅಲ್ಲಲ್ಲಿ ಬೀಡ ಬಿಡುತ ದಾನ ಪೂಜೆಯ-
ನಲ್ಲಲ್ಲಿ ಮಾಡುತ ನಿಲುತ
ಅಲ್ಲಲ್ಲಿ ಸ್ನಾನಭೋಜನಗಳ ಮಾಡುತ
ಮೆಲ್ಲನೆ ಕರ್ಣಾಟಕೈದಿ

[ಬೆಟ್ಟಗಳು, ನದಿಗಳು, ಗಿಡಗಳು.]

ನಿಟ್ಟಿಸಿ ಕರ್ಣಾಟಮೊಟ್ಟಜೆಯನು ನದಿ
ಬೆಟ್ಟವೀರೇಳು ಲೋಕದೊಳು
ಇಷ್ಟಿಲ್ಲ ಸಂಪದವೆಂದೆಯ್ದಿ ಬೆಳ್ಗುಳ-
ಬೆಟ್ಟದೊತ್ತಲಿ ಬೀಡ ಬಿಡಿಸಿ

[ಎಡಗಡೆ ದೊಡ್ಡಬೆಟ್ಟ, ಬಲಗಡೆ ಚಿಕ್ಕಬೆಟ್ಟ.]

ಸುರಶೈಲವೊ ರಜತಾದ್ರಿಯೊ ಹಿಮವದ್-
ಗಿರಿಯೊ ಮೇಣಷ್ಟಾಪದವೊ
ನಿರವಿಸಲುಭಯಪರ್ವತವಿವೆಯೆಂದ-
ಚ್ಚರಿವಟ್ಟು ನೃಪ ನಡೆನೋಡಿ

[ಕಾಲುತೊಳೆದು, ಪೂಜಾದ್ರವ್ಯಗಳನ್ನು ಕೊಂಡು, ಚಂದ್ರಗಿರಿಯನ್ನು ಹತ್ತುವರು.]

ನಿರವಿಸುತಿಂತು ವಿಂದುಟ್ಟು ಭವ್ಯಾವಳಿ-
ವೆರಸು ಪೂಜಾದ್ರವ್ಯ ಸಹಿತ
ಸುರಪವೈಭವದಿಂದ ಚಂದ್ರಗಿರಿಯನೇರಿ
ಚರಣದೊಳೆದು ಮುಂದೋಣಿಯ

ಜಲದಿ ಸ್ನಾನವ ಮಾಡಿಯಲರಗಂಧವ ಪೊತ್ತು
ಪೊಳೆವ ಜಿನಾಂಘ್ರಿಪದ್ಮದೊಳು
ಸುಳಿದಾಡಿ ಸುಕೃತವಡೆದು ಬಂದ ತಂಗಾಳಿ
ಸುಳಿದುದರಸನಿದಿರಾಗಿ

# ನಾಲ್ಕನೆಯ ಪ್ರವೇಶ

[ಚಂದ್ರಗಿರಿಯ ಮೇಲೆ. ನೇಮಿಚಂದ್ರ, ಚಾವುಂಡರಾಯ, ಆತನ ತಾಯಿ, ಹೆಂಡತಿ, ಮಕ್ಕಳು, ಪರಿವಾರ. ಬೆಟ್ಟದಲ್ಲಿ ಸಂಚಾರ.]

## ಆಚಾರ್ಯ ನೇಮಿಚಂದ್ರ

ಭವ್ಯರ್ಕಳೆ,

ಉಪಸರ್ಗೇ ದುರ್ಭಿಕ್ಷೇ ಜರಸಿ ರುಜಾಯಾಂ ಚ ನಿಃಪ್ರತೀಕಾರೇ
ಧರ್ಮಾಯ ತನುವಿಮೋಚನಂ ಆಹುಃ ಸಲ್ಲೇಖನಾಂ ಆರ್ಯಾಃ

ಮತ್ತಂ

ಸಮ್ಯಕ್ತ್ವಮಮಲಂ ಅಮಲಾನ್ಯನುಗುಣಶಿಕ್ಷಾವ್ರತಾನಿ ಮರಣಾಂತೇ
ಸಲ್ಲೇಖನಾ ಚ ವಿಧಿನಾ ಪೂರ್ಣಃ ಸಾಗಾರಧರ್ಮೋಽಯಂ

ಇಂತಪ್ಪ ಸಲ್ಲೇಖನವ್ರತಮಂ ಕೈಕೊಂಡು ಸ್ವರ್ಗಾಪವರ್ಗಂಗಳನಡ್ಡೈಂದ ಪಲರುತ್ತಮರಿಂ ಪವಿತ್ರೀಕೃತಮಾದುದೀ ಕಟವಪ್ರನಾಮಗಿರಿರಾಜಂ. ಆದಱಿಂ ತಾಂ ತೀರ್ಥಗಿರಿಯುಂ ಋಷಿಗಿರಿಯುಮೆಂಬ ಜಸಕ್ಕೆ ಸಂದುದೀ ಕಲ್ಬಪ್ಪು!

ಕಾಬ್ಬಪ್ಪೆ, ನಿನಗಿದೊ ಕುಂಬಿಡೊಪ್ಪೆಂ!

[ಎಲ್ಲರೂ ನಮಸ್ಕರಿಸಿ, ಮುಂದೆ ನಡೆವರು. ನೇಮಿಚಂದ್ರರು ಅಲ್ಲಲ್ಲೇ ಕಲ್ಲಲ್ಲಿ ಕೊರೆದಿರುವ ಶಾಸನಗಳನ್ನು ಓದುವರು. ಮಿಕ್ಕವರು ಒಂದೊಂದು ಕಡೆಯೂ ಭಕ್ತಿಯಿಂದ ಕೈಮುಗಿದು ಮುಂದೆ ಹೋಗುವರು.]

ಇದೊ ಇತ್ತ——ತೀರ್ಥದ ಗೊರವಡಿಗಳ್ . . . ಈ ಬಳಿ ಉಳ್ಳಿಕ್ಕಲ್ ಗೊರವಡಿಗಳ್ . . . ಇಲ್ಲಿ ನೆಡುಬೊಱೆಯ ಪಾನಪಭಟಾರರ್ . . . ನೋನ್ತು ಮುಡಿಪ್ಪಿದಾರ್ . . . ನೋನ್ತು ಸೌಖ್ಯಸ್ಥರಾಯ್ದಾರ್ . . .

ಶ್ರೀ ಮಾಸೇನರ್ ಪರಮಪ್ರಭಾವರಿಷಿಯರ್ ಕಳ್ವಪ್ಪಿನಾ ಬೆಟ್ಟದುಳ್
ಶ್ರೀ ಸಂಗಂಗಳ ಪೇಳ್ದು ಸಿದ್ಧಸಮಯಂ ತಪ್ಪಾದೆ ನೋನ್ತೊಪ್ಪಿನಿನ್
ಪ್ರಾಸಾದಾನ್ತರಮಾನ್ ವಿಚಿತ್ರಕನಕಪ್ರಜ್ವಲ್ಲದಿನ್ ಮಿಕ್ಕದಾನ್
ಸಾಸಿರ್ವರ್ವರಸಪ್ಪೂಜಿದಂದುಂ ಅವರ್ ಸ್ವರ್ಗಾಗ್ರಮಾನೇಱಿದಾರ್

ಮತ್ತಿತ್ತೀ ಬಟ್ಟೆಯೊಳ್ . . . ಬಾಲದೇವಗುರುವಡಿಗಳ್ . . . ಸುರ ಲೋಕವಿಭೂತಿ ಎಯ್ದಿದಾರ್ . . .

ಸ್ವಸ್ತಿ ಶ್ರೀ ಇನುಜ್ಞಾರಾಮೆಳ್ಳಗವಾಸಗುರುವರ್
ಕಳ್ಬಪ್ಪ ಬೆಟ್ಟಮ್ಮೇಲ್ವಾಲಂಕೆಯ್ದಾರ್ . . .

ಶ್ರೀ ಭದ್ರಬಾಹು ಸಚಂದ್ರಗುಪ್ತಮುನೀಂದ್ರಯುಗ್ಮದಿನೊಪ್ಪೆ ವಲ್
ಭದ್ರಮಾಗಿದ ಧರ್ಮಮಂದುವಳಿಕ್ಕೆವನ್ದಿನಿಸಲ್ಕಲೋ
ವಿದ್ರುಮಾಧರ ಶಾನ್ತಿಸೇನಮುನೀಶನಾಕ್ಕಿಎ ವೆಳ್ಗೊಳತ್
ಅದ್ರಿಮೇಲಶನಾದಿವಿಟ್ಟಪುನರ್ಭವಕ್ಕೆಱೆ ಆಗಿದಾನ್

ಇದೋ ಈ ಪಕ್ಕದುಳ್ . . . ನಾಗಮತಿಗನ್ತಿಯರ್ . . . ಸಿಂಗನನ್ದಿ ಗುರುವಡಿಗಳ್ . . . ನಾಗಸೇನಗುರುವಡಿಗಳ್ . . . ಧರ್ಮದಾಸಸಿಮತಿಶ್ರೀ ಗನ್ತಿಯರ್ . . . ಕಳ್ವಪ್ಪಿನುಳ್ . . . ತೊಱದಾರಾಧನೆನೋನ್ತು ತೀರ್ಥಗಿರಿ ಮೇಲ್ ಸ್ವರ್ಗಾಲಯಕ್ಕೇಱಿದಾರ್ . . .

ಆಃ! ಭವ್ಯರ್ಕಳೀ ಕಾವ್ಯಮಂ ಕೇಳಲಿವೇಲ್ಕುಂ!

ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಜವೋಲ್ಮಂಜುವೊಲ್ತೋಱಿ ಬೇಗಂ
ಪಿರಿಗುಂ ಶ್ರೀರೂಪಲೀಲಾಧನವಿಭವಮಹಾರಾಶಿಗಳ್ ನಿಲ್ಲವಾರ್ಗಂ
ಪರಮಾರ್ಥಂ ಮೆಚ್ಚೆನಾನೀಧರಣಿಯುಳಿರವಾನೆನ್ದು ಸನ್ಯಾಸನಂಗೆ-
ಯ್ದುರುಸತ್ತ್ವಂ ನಂದಿಸೇನಪ್ರವರಮುನಿವರನ್ ದೇವಲೋಕಕ್ಕೆ ಸಂದಾನ್

ಇನ್ನಿಲ್ಲಿಯೆ ನಿಲ್ವೊಂ. ಚಂದ್ರಗುಪ್ತ ಬಸದಿ ಬಂದತ್ತು.

[ಎಲ್ಲರೂ ಬಸದಿಯ ಮುಂದೆ ಅಡ್ಡ ಬೀಳುವರು.

## ಐದನೆಯ ಪ್ರವೇಶ

[ಚಿಕ್ಕಬೆಟ್ಟ. ಎಡಗಡೆ ಕೊನೆಗೆ ಚಂದ್ರಗುಪ್ತ ಬಸದಿ. ಎಲ್ಲರೂ ಮಲಗಿದ್ದಾರೆ. ಸ್ವಲ್ಪ ಹೊತ್ತಿನ ಮೇಲೆ ಯಕ್ಷಿಯರು ಪ್ರತ್ಯಕ್ಷ.]

**ನೇಪಥ್ಯಗಾನ**

ಅಂದಿನಿರುಳು ಚಂದ್ರಗುಪ್ತರಚಿತ ಜಿನ-
ಮಂದಿರದೊಳು ನಿದ್ರೆಯಿರಲು
ಬಂದು ಕೂಷ್ಮಾಂಡಿ ಪದ್ಮಾಂಬಿಕೆಯರುಗಳಿಂ-
ತೆಂದು ಪೇಳಿದರು ಸ್ವಪ್ನದೊಳು

**ಯಕ್ಷಿಯರು**

ತೆರಳ್ವುದರಿದು ತತ್‌ಪೌದನಪುರ ದೂರ
ಗಿರಿಯೊಳು ನಿಂದು ಕಾರ್ಮುಕಕೆ
ಶರವ ಜೋಡಿಸೆ ಸೆಡೆಗುಂಡೊಡೆದು ಭುಜಬಲಿ-
ಜಿನನು ಪ್ರತ್ಯಕ್ಷವಾಗುವನು

[ಕತ್ತಲೆ ಕ್ರಮೇಣ ಕರಗಿ ಬೆಳಗಾಗುತ್ತದೆ. ಚಾವುಂಡರಾಯನು ಎದ್ದು, ಬಿಲ್ಲು ಹಿಡಿದು . . . ಮುಂದಿನ ಅಭಿನಯ ಪದ್ಯದಲ್ಲೆ ಸ್ಪಷ್ಟವಾಗಿದೆ.]

**ನೇಪಥ್ಯಗಾನ**

ಎನುವ ಸ್ವಪ್ನವ ಕಂಡೆದ್ದು ಸ್ನಾನವ ಮಾಡಿ
ಜಿನಗೆ ವಂದಿಸಿ ಮುನಿಗೆರಗಿ
ಅನಶನಗೊಂಡು ಯಕ್ಷಿಯರನಾರಾಧಿಸಿ
ಜನಪತಿ ಬಿಲ್ಲಂಬ ಪಿಡಿದು

ನಡೆದು ಲೀಲಾಶೃಂಗದಿ ನಿಂದು ಬಿಲ್ಲ ಜೇ-
ವೊಡೆಯಲಾ ನಿನದಕೆ ಭೂಮಿ
ನಡುಗೆ ಕಡಲು ತುಳ್ಕೆ ದಿಗ್ಗಜ ದಿಕ್ಕೆಡೆ
ಕೆಡೆಯೆ ಕುಲಾಚಲನಿಕರ

ಸಿಡುಸರಲನು ಪೊಡಿ ಕಿವಿಯುವರೆಗೆ ತೆಗೆ-
ದಿಡೆ ಯಕ್ಷಿಯರನು ಜಪಿಸುತ
ಘುಡಿಘುಡಿಸುತ ಪೋಗಿ ಸಿಡಿಲಂತೆ ಪೊಡೆಯಲೊ-
ಗ್ಗೊಡೆದುದಖಂಡದ ಗುಂಡು

ಮುಂದಡ್ಡಬಿದ್ದಿದ್ದ ಗುಂಡೊಡೆಯಲು ಕೋಟಿ-
ಚಂದ್ರಾರ್ಕಕಿರಣಪ್ರಜ್ವಲಿತ
ಇಂದ್ರನರೇಂದ್ರಮುನೀಂದ್ರವಂದಿತ ಜಿನ-
ಚಂದ್ರನ ಮುಖ ತೋರಿದುದು

[ಈ ಚಿತ್ರವನ್ನು ಇಳಿದಂತೆ, ಆ ಚಿತ್ರವನ್ನು ಸರಿದಂತೆ ಅಭಿನಯಿಸಿ—]

ಕಾಣಲೊಡನೆ ಸಂತೋಷವನಂತಮನೈದಿ
ಕ್ಷೋಣೀಶ ಸಾಷ್ಟಾಂಗವೆರಗಿ
ಮಾಣದೆ ಗಿರಿಯನಿಳಿದುಚಂದ್ರಗಿರಿಯಿಂ
ಸಾನುರಾಗದಿ ನೋಡುವಾಗ

[ಮೆಳೆ, ಪೊದರು, ಕಮರಿ, ವೃಕ್ಷ, ಕ್ರೂರಮೃಗಗಳನ್ನು ದಾಟಲು, ಎದುರಿಗೆ ಅಸ್ಪಷ್ಟವಾದ ಗೋಮಟವಿಗ್ರಹ.]

ಎಲ್ಲೆಲ್ಲು ಗಗನ ಮುಟ್ಟುವ ಕೋಡುಂಗ-
ಲ್ಲೆಲ್ಲೆಲ್ಲು ಮೆಳೆಗಳ ಪೊದರು
ಎಲ್ಲೆಲ್ಲು ಕಮರಿ ಗುಹೆಗಳು ವೃಕ್ಷಗಳು ಮ-
ತ್ತೆಲ್ಲೆಲ್ಲು ಕ್ರೂರಮೃಗಗಳು

ಗುಂಡನೇರುತೆ ಗುಂಡನಿಳಿಯುತಖಂಡದ
ಗುಂಡೊಡೆದಿರ್ದ ದಾರಿಯೊಳು
ಮಂಡಲಪತಿಯೆಯ್ದಿ ಬಲಗುಂಡುಗಳ ಮಧ್ಯ-
ಗೊಂಡ ಜಿನೇಂದ್ರನ ಕಂಡು

[ನಮಸ್ಕರಿಸಿ, ಅವರ ಪಕ್ಕದ ಬಂಡೆಯ ಮೇಲೆ "ದಾನು–ದಾನಣ–ಪ್ರಾಣ್ಯಂ" ಎಂಬ ಅಕ್ಷರಗಳನ್ನು ಚಾವುಂಡರಾಯನು ಓದುವನು.]

ಪೊಡಮಟ್ಟರ್ಘ್ಯದವನು ತಾನೊರ್ವ
ಪಡೆದಂತೆ ಸಂತಸದಾಳಿ
ಎಡೆಯೊಳು ರಾಮರಾವಣಪೂಜ್ಯವೆಂದೆಂಬ
ಬಿಡಗಿನಕ್ಕರವಿರಲೋದಿ

[ಕಾಮಾಟಿಗಳು ಗಿಡ ಬಳ್ಳಿ ಕತ್ತರಿಸುವರು, ಪಾತಾಳಗುಹೆಗಳನ್ನು ಮುಚ್ಚುವರು.]

ಕಡಿಸಿ ಕಾಮಟಿಗರಿಂ ಗಿಡುತರುಲತೆಗಳ
ಯಿಡಿಕಿರಿದಿರ್ದ ಗುಂಡುಗಳ
ಪಡಿಸಿ ಕಲ್ಕುಟಿಗರಿಂ ಪಾತಾಳಗುಹೆಗಳ
ಬಿಡದೆ ಹೂಳಿಸಿ ಸಮಗೊಳಿಸಿ

[ವಿಗ್ರಹಕ್ಕೆ ಮುತ್ತಿಕೊಂಡಿರುವ ಕಲ್ಲುಗಳನ್ನು ಕಲ್ಕುಟಿಗರು ಕಡಿದು, ವಿಗ್ರಹ ಸ್ಪಷ್ಟವಾಗುವುದು.]

ಬೆಳೆದು ಬಹಳ ಕಾಲದಿಂದ ಮುಚ್ಚಿದ ಗುಂಡು-
ಗಳನೆಲ್ಲ ಒಡಸಿ ಶ್ರೀಜಿನನ
ತೊಳಪಂಗದರ್ಶನವನು ತೋರಿ ಲೋಕಕ್ಕೆ
ಯಿಳೆಯಾಣ್ಮನತಿಧನ್ಯನಾದ

ಕಡೆಯಾಣೆ ಜೊಂಬೆಗೆ ಕವಿದಿರ್ದ ದೂಳಿಯ
ಕೊಡಹಿಸಿ ಪೊಳಪಿಕ್ಕಿದಂತೆ
ಕಡೆಸಿ ಶಿಲ್ಪಿಗರಿಂದವೊಪ್ಪವಿಕ್ಕಿಸೆ ಕಾಂತಿ
ಮಡುಗಟ್ಟಿನಿಂದವೊಲಾಯ್ತು

[ಚಾವುಂಡರಾಯನೂ ಆತನ ತಾಯಿ ಹೆಂಡತಿ ಮಕ್ಕಳೂ ಗುರುವೂ ಮತ್ತೆ ಮತ್ತೆ ಗೋಮಟೇಶ್ವರ ವಿಗ್ರಹಕ್ಕೆ ನಮಸ್ಕರಿಸುವರು.]

ಚರಣಾದಿ ಮಸ್ತಕ ವರೆಗು ಸುಂದರವೆತ್ತ
ವರಮೂರ್ತಿಯನು ನೋಡಿ ನೋಡಿ
ಸುರಿಯಲಾನಂದಾಶ್ರು ಸಂತಸವುಕ್ಕಿ ಮೈ-
ಜಿರಗುವಟ್ಟಿರ್ದ ನೃಪೇಂದ್ರ

ನೋಡಿ ದಣಿಯ ಕೊಂಡಾಡಿ ದಣಿಯ ನ್ಯೆ-
ನೀಡಿ ದಣಿಯ ತೊಳತೊಳಗಿ
ಗಾಡಿವಡೆದ ದಿವ್ಯಮೂರ್ತಿಯ ಬಗೆಗೊಂಡೋ-
ಲಾಡಿ ದಣಿಯ ಸಂತಸದಿ

**ಕಾಳಲದೇವಿ**

ಕಂಡೆ ಪೌದನಪುರದೊಡೆಯನ ಪ್ರತ್ಯಕ್ಷ
ಕಂಡೆ ಪುಣ್ಯದ ಪುಂಜವನು
ಕಂಡೆ ಪರಂಜ್ಯೋತಿಯ ಕಣ್ಮನದುಂಬೆ
ಕಂಡೆ ಶ್ರೀಭುಜಬಲಿ ನಿನ್ನ

ತೊಳಗಿ ಬೆಳಗುವ ನಿನ್ನಂಗಲಾವಣ್ಯದ
ಜಳಧಿಯೊಳೆನ್ನ ಕಣ್ಮೀನು
ಸುಳಿದಿಳಿದೇರುತ ಬಳಲದೆ ಬಳಸುತ
ನೆಲೆಗೊಂಡುದೈ ಮುಖಾಂಬುಜದಿ

ತೆಳಿವೆಳಗಿನ ಕುಡಿವೆಳಗಿನೊಳ್ವೆಳಗಿನ
ಎಳೆವೆಳಗಿನ ತಣ್ವೆಳಗಿನ
ಬೆಳುವೆಳಗಿನ ಬಳ್ಳಿವೆಳಗಿನ ಬಳಗದ
ಬೆಳಸಾದ ಗೋಮಟ ಜಿನಪ

## ಆರನೆಯ ಪ್ರವೇಶ

[ದೊಡ್ಡಬೆಟ್ಟದ ಮೇಲಕ್ಕೆ ಹೋಗುವ ದಾರಿ. ಹತ್ತುವವರು ಹಲವರು ಮಾರ್ಗಾಯಾಸವನ್ನು ಆರಿಸುತ್ತ ಕುಳಿತಿದ್ದಾರೆ.]

**ಒಬ್ಬ**

ಓವೊ! ಆದಾರದು? ಪರ್ವತಮಂ ಪರಿದೇಱುತಿರ್ಪ ಮುತ್ತಬ್ಬೆ?

**ಮತ್ತೊಬ್ಬ**

(ಕುರಿತು ನೋಡಿ)

ಆಕೆ ಮುತ್ತಬ್ಬೆಯಲ್ಲವೆಲವೊ ಬೆಳ್ಳೆ! ಆಕೆ ಅತ್ತ್ಯಬ್ಬೆ!
ದಾನಚಿಂತಾಮಣಿಯೆನಿಸಿದ ಅತ್ತಿಮಬ್ಬರಸಿ ಆಕೆ!

**ಒಬ್ಬ**

ಅತ್ತಿಮಬ್ಬೆ? ಪಡೆವಳ ತೈಲಪನ ಜನನಿ?

**ಮತ್ತೊಬ್ಬ**

ಆಕೆಯೆ.

ಬುಧಜನವಂದಿತೆ ಧರ್ಮ-
ಪ್ರಧಾನೆ ದರ್ಶನವಿಶುದ್ಧೆ ದಾನಗುಣೈಕಾಂ-
ಬುಧಿಯೆನಿಸಿದ ಕವಿವರಕಾ-
ಮಧೇನುವೆಂದೆಂಬುದತ್ತಿಮಬ್ಬೆಯನೆ ಜಗಂ

**ಇನ್ನೊಬ್ಬ**

ಜಿನಪದಭಕ್ತೆ ಜಗತ್ರಯ-
ಜನವಂದಿತೆ ಚಕ್ರವರ್ತಿಪೂಜಿತೆ ಜಿನಶಾ-
ಸನರುಚಿ ಪಡೆವಳತೈಲನ
ಜನನಿಯೆ ತೀರ್ಥಕರಜನನಿಯೆನ್ನದರೊಳರೇ

ಅದೆಂತೆನೆ—

ಮನದೊಳ್ ತಾಳ್ದುವಳೀಸತಿ
ಜಿನನಂ ಜಿನಜನನಿ ಗರ್ಭದೊಳ್ ತಾಳ್ದುವಳಿಂ-

ಬಿನಿತೆ ವಿಕಲ್ಪಂ ತೈಲನ
ಜನನಿಗೆ ಜಿನಜನನಿಗೇಂ ವಿಕಲ್ಪಮುಮುಂಟೇ

**ಬೇರೊಬ್ಬ**

ಅಂತಾದೊಡೀಕೆಯುಂ ಪೆಸರ್ಗೊಳ್ವುದು ಪುಣ್ಯಕಾರಣಮಲ್ತೇ!

**ಇನ್ನೊಬ್ಬ**

ಬಾದೇಂ? ದಿಟಂ ನುಡಿದೈ.

ಅಳುರಮ ಕೀರ್ತಿ ಮುಟ್ಟದು ವಿಷಾಹಿ ಮಹಾಸತಿಯಿರ್ದಮಂಡಲಂ
ಬೆಳೆವುದು ಬೇಡಿದಂತೆ ಮಳೆಕೊಳ್ವುದೆನಿಪ್ಪ ಜಸಕ್ಕೆ ನೋಂತು ಭೂ-
ತಿಲಕಪವಿತ್ರೆಯುಂ ಗುಣಪವಿತ್ರೆಯನಾಸತಿಯುಂ ಮಹಾಸತೀ-
ತಿಲಕೆಯನತ್ತಿಮಬ್ಬರಸಿಯುಂ ಪೆಸರ್ಗೊಳ್ವುದು ಪುಣ್ಯಕಾರಣಂ

ಬಿಳಿಯರಳೆಯಂತೆ ಗಂಗಾ-
ಜಳದಂತೆಸೆವಜಿತಸೇನಮುನಿಪತಿಯ ಗುಣಾ-
ವಳಿಯಂತೆ ನೆಗಟ್ದ ಕೊಪಣಾ-
ಚಳದಂತೆ ಪವಿತ್ರಮತ್ತಿಮಬ್ಬೆಯ ಚರಿತಂ

[ಬೆಟ್ಟದ ಮೇಲಿನಿಂದ ಚಾವುಂಡರಾಜಾದಿಗಳು ಜಯಜಯಕಾರ ಮಾಡುತ್ತ ಬರುವರು.]

**ನೇಪಥ್ಯದಲ್ಲಿ**

ಶ್ರೀ ಜಿನಧರ್ಮವಿಭೂತಿವಿರಾಜಿತೆ ಜಯಜಯಾ!
ಚಾಳುಕ್ಯಚಕ್ರವರ್ತಿಪೂಜಿತೆ ಜಯಜಯಾ!
ಭವ್ಯಾಜಿರಕಲ್ಪಲತಾವಿಭ್ರಾಜಿತೆ ಜಯಜಯಾ!
ಮಲ್ಲಪಯ್ಯನ ಮಗಳತ್ತಿಮಬ್ಬೆ ಜಯಜಯಾ!
ಜಿನಧರ್ಮದಯಾವಶವರ್ತಿ ಜಯಜಯಾ!
ದಾನಚಿಂತಾಮಣಿ ಜಯಜಯಾ!
ನಾಗದೇವಾಂಗನೆ ಜಯಜಯಾ!
ಪಡೆವಳ ತೈಲಪನ ಜನನಿ ಜಯಜಯಾ!
ಜಿನಧರ್ಮಪತಾಕೆ ಜಯಜಯಾ!

[ಚಾವುಂಡರಾಜಾದಿಗಳು ರಂಗಸ್ಥಲಕ್ಕೆ ಬರುವವೇಳೆಗೆ ಅತ್ತಿಮಬ್ಬೆಯೂ ರನ್ನನೂ ಬರುವರು. ಅತ್ತಿಮಬ್ಬೆಯ ಪಥಶ್ರಮ ಸುವ್ಯಕ್ತವಾಗಿದೆ.]

**ಚಾವುಂಡರಾಯ**

ಬರವೇೞ್ಕುಂ ಅಬ್ಬೆ. ಬಾ, ರನ್ನ.
ಪರ್ವತಂ ಕಡಿದು. ಉಪಸರ್ಗಮಾದುದಿಲ್ಲಂ ಗಡ!

**ಅತ್ತಿಮಬ್ಬೆ**

ಕುಕ್ಕುಟಜಿನೇಶ್ವರನ ಸನ್ನಿಧಿಯ ಸ್ವರ್ಗಕ್ಕೆ
ಪೋಪುದುಪಸರ್ಗಮಲ್ತು; ಇದೆ ಉಪಸ್ವರ್ಗಂ!

[ಪನಿಮಳೆ ಬೀಳುವುದು. ಎಲ್ಲರೂ ವಿಸ್ಮಿತರಾಗುವರು.]

**ಎಲ್ಲರೂ**

ಚೋದ್ಯಂ! ಆಶ್ಚರ್ಯಂ! ವಿಸ್ಮಯಂ!

**ಕವಿರತ್ನ**

ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ ಜಿನಭಕ್ತೆ ಪೋಗಿ ಕಾ-
ಣ್ಬನ್ನೆಗಮನ್ನಮಂ ಬಿಸುಟು ಪರ್ವತಮಂ ಪರಿದೇಱೆ ತಜ್ಜಿನಾ-
ಸನ್ನದೊಳತ್ತಿಮಬ್ಬೆಗೆ ಪಥಶ್ರಮಮಾಱಲಕಾಲವೃಷ್ಟಿಯಾ-
ಯ್ತೆನ್ನದೊ ದೇವಭಕ್ತೆಗದು ಚೋದ್ಯಮೆ ಕೊಳ್ಳವೆ ಪುಷ್ಪವೃಷ್ಟಿಗಳ್

[ರೋಮಾಂಚಿತರಾಗಿ ಒಬ್ಬೊಬ್ಬರೂ ಆಕೆಯನ್ನು ಕೀರ್ತಿಸುವರು.]

**ಆಚಾರ್ಯ ನೇಮಿಚಂದ್ರ**

ನಯಮಂ ತಾಳ್ದಿ ಪೊಗೞ್ತೆವೆತ್ತ ಭುವನಕ್ಕಾರಾಧ್ಯೆಯಾವತ್ತಿಮ-
ಬ್ಬೆಯ ಶೀಲೋನ್ನತಿಗತ್ತಿಮಬ್ಬೆಯ ಮಹಾದಾನೋತ್ಸವಕ್ಕತ್ತಿಮ-
ಬ್ಬೆಯ ಧರ್ಮಸ್ಥಿತಿಗತ್ತಿಮಬ್ಬೆಯ ಜಿನೇಂದ್ರಾರಾಧನಕ್ಕತ್ತಿಮ-
ಬ್ಬೆಯ ಭಕ್ತಿಕ್ರಮಕತ್ತಿಮಬ್ಬೆಯ ಗುಣಕ್ಕಾರುಂ ಸಮಂ ಪೋಲ್ವರೇ

**ಆಚಾರ್ಯ ಅಜಿತಸೇನ**

ಗುಣದೊಳ್ಪಿಂ ಸಂದ ತನ್ನನ್ವಯಕೆ ನೆಗೞ್ದಳಂಕಾರಮಂ ಮಾೞ್ಪ ಭೂಷಾ-
ಮಣಿಯುಂ ಶ್ರೀ ಜೈನಧರ್ಮೋನ್ನತಿಯ ಮಹಿಮೆಯುಂ ಭಕ್ತಿಯಿಂ ಕಾವ ರಕ್ಷಾ-

ಮಣಿಯುಂ ಭವ್ಯೋತ್ತಮಾಂಗಾಸ್ಪದದೊಳೆಗುಣದುದ್ದಾನಿಯುಂಮಾಲ್ಪ ಚೂಡಾ
ಮಣಿಯುಂ ಶ್ರೀ ದಾನಚಿಂತಾಮಣಿಯೆ ಪೆಜರೊಳಿಂತೀ ಗುಣಶ್ರೇಣಿಯುಂಟೇ

## ಕಾಳಲದೇವಿ

ಒಡಲನುಪವಾಸದಿಂ ತ-
ನ್ನೊಡಮೆಯನನವರತದಾನದಿಂ ತವಿಸಿ ಜಸಂ-
ಬಡದೆಯ್ ನೂರ್ಮಡಿ ತೈಲನ
ಪಡೆವಳ ತೈಲಪನ ಜನನಿ ನಿನಗೆಣೆಯೊಳರೇ

ಜಿನಪೂಜೋತ್ಸವಕೆಲ್ಲಿಯಂ ಜಿನಕಥಾಳಾಪೋತ್ಸವಕ್ಕೆಲ್ಲಿಯುಂ
ಜಿನತೀರ್ಥೋತ್ಸವಕೆಲ್ಲಿಯುಂ ಜಿನಮುನಿಪ್ರಾತೋತ್ಸವಕ್ಕೆಲ್ಲಿಯುಂ
ಜಿನಗೇಹೋತ್ಸವಕೆಲ್ಲಿಯುಂ ಜಿನಮಹಾದಾನೋತ್ಸವಕ್ಕೆಲ್ಲಿಯುಂ
ಧನಮಂ ಪತ್ತಿಸುತಿರ್ಪೆ ನೀನೆ ಪಿರಿಯೈ ಶ್ರೀ ದಾನಚಿಂತಾಮಣೀ

## ಚಾವುಂಡರಾಯ

ನೆಗಲ್ದರ್ ದಾನದಿನೊರ್ವರೊರ್ವರಜೀವಂ ತಾಳ್ದಿರ್ದ ಸಮ್ಯಕ್ತ್ವದಿಂ
ನೆಗಲ್ದರ್ ಧರ್ಮದ ಪೆರ್ಮೆಯಿಂ ಕೆಲಕೆಲರ್ ಶೀಲವ್ರತಾಚಾರದಿಂ
ನೆಗಟ್ದ್ಯೆ ನೀನೆ ಜಗಕ್ಕೆ ದಾನಗುಣದಿಂ ಸಮ್ಯಕ್ತ್ವದಿಂ ಧರ್ಮದಿಂ
ಮಿಗೆ ಶೀಲವ್ರತದಿಂ ಸದಾಚರಣದಿಂ ಶ್ರೀ ದಾನಚಿಂತಾಮಣೀ

## ಅತ್ತಿಮಬ್ಬೆ

(ಮುತ್ತ ಮುಖವಲ್ಲಿ ಮುಗುಳುನಗೆ ಚೆಲ್ಲುತ್ತ)

ಇಂ ಪೋಪಮೊ ಸ್ವಾಮಿಯ ಸಂದರ್ಶನಕ್ಕೆ?

## ಚಾವುಂಡರಾಯ

ಪೋಪಂ ಅಬ್ಬೆ. ಇತ್ತಲಿತ್ತಲ್.

(ಎಲ್ಲರೂ ಹೋಗುವರು.)

## ಏಳನೆಯ ಪ್ರವೇಶ

[ಭವ್ಯವಾದ ಗೋಮಟೇಶ್ವರ ವಿಗ್ರಹದ ಎದುರು ಚಾವುಂಡರಾಯ, ಆತನವರು, ಅತ್ತಿಮಬ್ಬೆ, ರನ್ನ ಮೊದಲಾದವರು ನೇಪಥ್ಯಗಾನವಾಗುವಾಗ ಬಂದು ಬಾಗಿ ನಿಲ್ಲುವರು.]

### ನೇಪಥ್ಯಗಾನ

ಶ್ರುತಮುಂ ದರ್ಶನಶುದ್ಧಿಯುಂ ವಿಭವಮುಂ ಸದ್ವೃತ್ತಮುಂ ದಾನಮುಂ
ಧೃತಿಯುಂ ತನ್ನೊಳೆ ಸಂದ ಗಂಗಕುಳಚಂದ್ರಂ ರಾಚಮಲ್ಲಂ ಜಗ-
ನ್ನುತನಾ ಭೂಮಿಪನ ದ್ವಿತೀಯವಿಭವಂ ಚಾವುಂಡರಾಯಂ ಮನು-
ಪ್ರತಿಮಂ ಗೊಮ್ಮಟನತ್ತೆ ಮಾಡಿಸಿದನಿಂತೀ ದೇವನಂ ಯತ್ನದಿಂ

[ನೇಪಥ್ಯದಲ್ಲಿ ಕನ್ನಡಿಗರೂ ತಮಿಳರೂ ಮಹಾರಾಷ್ಟ್ರೀಯರೂ ಘೋಷಿಸುವರು.]

### ಕನ್ನಡಿಗರು

ಶ್ರೀ ಚಾಮುಂಡರಾಜಂ ಮಾಡಿಸಿದಂ!

### ತಮಿಳರು

ಶ್ರೀ ಚಾಮುಂಡರಾಜನ್ ಶೆಯ್ವಿತ್ತಾನ್!

### ಮಹಾರಾಷ್ಟ್ರೀಯರು

ಶ್ರೀ ಚಾವುಂಡರಾಜೇಂ ಕರವಿಯಲೇಂ!

### ಅತ್ತಿಮಬ್ಬೆ

ಶ್ರೀ ಪಾದಾಂಭೋಜದೊಳ್ಕುಂಬರಿದೆಜಗುತಮಳ್ದುಂಬಿಯಂತಕ್ಷಿಯುಗ್ಮಂ ನಾ-
ಭೀಪೂರ್ಣಾವರ್ತದೊಳ್ ತತ್ತಳಿಸುತುಮೆಳೆಮೀನಂತೆ ವಕ್ತ್ರೇಂದುವಂ ಸಾ-
ದಾರ್ಪೊಟ್ಟುಂ ನರ್ತನಂಗೆಯ್ದುದು ಚಟುಳಚಕೋರಾಳಿಯಂತೆನ್ನ ನೇತ್ರಂ
ಬಾಪ್ಪಿನ್ನೆಂತಪ್ಪ ಲಾವಣ್ಯದ ತವಸಿಧಿಯೋ ನಿನ್ನಮೆಯ್ ಗುಮ್ಮಟೇಶಾ

### ಚಾವುಂಡರಾಯ

ನಿನ್ನಂಗಲಾವಣ್ಯಜಲ ಪಾಪಕರ್ದಮ-
ವನ್ನೆ ತೊಳೆವುದದು ಸಹಜ
ನಿನ್ನ ಮುಖೇಂದುವೆನ್ನಯ ನಯನಾಬ್ಜಗ-
ಳನ್ನಲರಿಪ ಬಗೆಯೇನು

ಸುರಪತಿ ಸಾಸಿರ ಕಣ್ಣಲಿ ಮಹಿಮೆಯ
ನಿರವಿಸೆ ಕಡೆಗಾಣದಾದ
ಎರಡು ಕಣ್ಣುಳ್ಳವರಾವೆಂತು ಲಾವಣ್ಯ-
ಶರಧಿಯ ಕಡೆಗಂಡಪೆವು

### ಆಚಾರ್ಯ ನೇಮಿಚಂದ್ರ

ಅತಿತುಂಗಾಕೃತಿಯಾದೊಡಾಗದದಱೊಳ್ ಸೌಂದರ್ಯಮೌನ್ನತ್ಯಮುಂ
ನುತಸೌಂದರ್ಯಮುಮಾಗೆ ಮತ್ತತಿಶಯಂ ತಾನಾಗದೌನ್ನತ್ಯಮುಂ
ನುತಸೌಂದರ್ಯಮುಮೂರ್ಜಿತಾತಿಶಯಮುಂ ತನ್ನಲ್ಲಿ ನಿಂದಿರ್ದುವೇಂ
ಕ್ಷಿತಿಸಂಪೂಜ್ಯಮೊ ಗೊಮ್ಮಟೇಶ್ವರಜಿನಶ್ರೀರೂಪಮಾತ್ಮೋಪಮಂ

### ಆಚಾರ್ಯ ಅಜಿತಸೇನ

ಸಮ್ಮದವಾಗಲಾಗ ಕೊಲೆಯುಂ ಕಳವುಂ ಪುಸಿಯುಂ ಪರಾಂಗನಾ-
ಸಮ್ಮತಿಯುಂ ಪರಿಗ್ರಹದ ಕಾಂಕ್ಷೆಯುಮೆಂಬಿವಱಿಂದಮಾದೊಡೆಂ-
ದುಮ್ಮನುಜಂಗಿಹತ್ರೆಯ ಪರತ್ರೆಯ ಕೇಡೆನುತುಂ ಮಹೋಚ್ಚದೊಳ್
ಗೊಮ್ಮಟದೇವನಿರ್ದು ಸಲೆ ಸಾಱುವವೋಲೆಸೆದಿರ್ದನೀಕ್ಷಿಸೈ

### ಚಾವುಂಡರಾಯ

ಅಬ್ಬೆ! ಸ್ವಾಮಿಯೆ ಸಾಕ್ಷಿ, ನಿನ್ನಂ ಕೇಳ್ವುದೊಂದುಂಟು.

ಪುರುದೇವಾಜಿತದೇವರಿರ್ವರೆ ದಲಾದ್ಯೋಪಾದ್ಯತೀರ್ಥೇಶ್ವರರ್
ಭರತೇಶಂ ಸಗರೇಶನಿರ್ವರೆ ದಲಾದ್ಯೋಪಾದ್ಯ ಚಕ್ರೇಶ್ವರರ್
ವರದಾನೋತ್ತಮನಾದನಾದಿಯುಗದೊಳ್ ಶ್ರೇಯಾಂಸನೀಕಾಲದೊಳ್
ಪರಮಶ್ರಾವಕಿ ನೀನೆ ದಾನಿಯೆ ವಲಂ ಶ್ರೀದಾನಚಿಂತಾಮಣೀ

ಜಗದೊಳಗಾದಿಪುರಾಣಂ ನೆಗಳ್ದುದು ಮುಂ ಪಂಪನಿಂದೆ!
ಪೊನ್ನಿಗನಿಂದಂ ನೆಗಳ್ದುದು ಶಾಂತಿಪುರಾಣಂ!
ಉಪಮಾತೀತಮೆನಿಪ್ಪೀ ಪುರಾಣರತ್ನಂಗಳ ರೇಖೆಗಂ ಬರಲ್
ಪೇೞಿಸಾ ಕವಿರತ್ನನಿಂದಮಜಿತನ ಕಥೆಯಂ.

ಪೊನ್ನಿಗನುಂ ಮಲ್ಲಪನುಂ
ಪೊನ್ನಸಿನಱ್ತಿಯೆ ಪುರಾಣಚೂಡಾಮಣಿಯಂ
ಮುನ್ನಂ ಪೇೞಿಸಿದಂತೆ ಗು-
ಣೋನ್ನತೆ ಕವಿರತ್ನನಿಂದಿದಂ ಪೇೞಿಸು ನೀಂ

**ಅತ್ತಿಮಬ್ಬೆ**

[ಗೋಮಟೇಶ್ವರನಿಗೆ ಮಣಿದು, ರನ್ನನತ್ತ ನೋಡುವಳು.]

**ಕವಿರತ್ನ**

ಅತ್ತಿಮಬ್ಬರಸಿಯರದೊಂದು ಹಸಾದಂ!
ಭ್ರಾಂತೇನಾದಿಪುರಾಣದ
ಶಾಂತಿಪುರಾಣದ ಸಮಾನಮೆನೆ ಕೃತಿಯಂ ಕ-
ಲ್ಪಾಂತಸ್ಥಾಯಿಯನಾಶ್ರಿತ-
ಚಿಂತಾಮಣಿಗತ್ತಿಮಬ್ಬೆಗಱ್ತಿಯೆ ಪೇೞ್ವೆಂ

ಎನಿತುಂಟಾಗಮವರ್ಣನ-
ಮನಿತುಮನೊಳಕೊಂಡು ಸಕಲಭವ್ಯಜನಂಗ-
ಳ್ಗನುರಾಗಮನೊಡರಿಸಿದಪು-
ದೆನಿಪ ಪುರಾಣಂ ಪುರಾಣತಿಲಕಮೆನಿಕ್ಕುಂ

**ಅತ್ತಿಮಬ್ಬೆ**

ಪೆಱವುಳಿಯುಳ್ಳುವಿಲ್ಲಿಯೊಳವಾಗಮಭಾಷೆಗಳಿಲ್ಲಿಯುಳ್ಳುವಂ
ಪೆಱವುಳಿ ಕಾಣಲಾಗದೆನೆ ಪಂಪನ ಪೊನ್ನನ ಪೇೞ್ದ ಕಬ್ಬದೊಳ್
ನೆಱೆಯೆ ಪರಿಸ್ಫುಟಂ ನೆಱೆಯದಿರ್ದುದುಮಂ ನುಡಿದೆಯ್ದೆ ಬಳ್ಪಿ ಕ-
ಣ್ದೆಱೆಯೆ ನೆಗಳ್ಚಿ ನೀಂ ಕವಿಚತುರ್ಮುಖ ಆಗಮವೇದಿಯಪ್ಪುದಂ

## ಕವಿರತ್ನ

ಅಂತೆಯಕ್ಕೆ.

ಎನಿತೊಳವು ಮನದ ಸಂದೆಯ-
ಮನಿತುಮಸಂದಿಗ್ಧಮೆನಿಸುಗುಂ ಧರ್ಮದೊಳ-
ಪ್ಪನುರಾಗಮೊದವುಗುಂ ರ-
ತ್ನನ ಪೇಳ್ವಜಿತನ ಪುರಾಣಮಂ ಕೇಳಲೊಡಂ

ಪೆಸರ್ಗೊಂಡಟ್ಟಿಯೊಳತ್ತಿಮಬ್ಬೆಯ ಗುಣವ್ರಾತಂಗಳಂ ಕೇಳ್ದ ಭ-
ವ್ಯಸಮೂಹಂ ಪೊಗಳ್ವಂತು ಕೀರ್ತಿ ನೆಗಳ್ವಂತೀಲೋಕದೊಳ್ ಬಲ್ಮೆ ರಂ-
ಜಿಸೆ ಬಲ್ಲರ್ಗೆಡೆಗೊಂಡು ಬಣ್ಣಿಸೆ ಮಹಾಕಾವ್ಯಂಗಳೊಳ್ ಮೆಚ್ಚಿ ಬ-
ಣ್ಣಿಸುವೆಂ ಪುಣ್ಯಪುರಾಣಮಂ ಜಿತಮನೋಜಾತಾಜಿತಸ್ವಾಮಿಯಾ

## ಅತ್ತಿಮಬ್ಬೆ

ಗುರುಗಳಜಿತಸೇನಾಚಾರ್ಯರಿಂದ್ರಾದಿವಂದ್ಯಾ-
ಚರಿತರಜಿತಶೌರ್ಯಸ್ವಾಮಿ ಚಾವುಂಡರಾಯಂ
ವರದನಜಿತನಾಥಂ ಸತ್ಯನೆಂದಂದು ರತ್ನಂ-
ಬರೆಗಮಧಿಕಪುಣ್ಯಂ ನೋಡೆಯೇಂ ನೋಂತನಾವೊಂ

## ಆಚಾರ್ಯ ನೇಮಿಚಂದ್ರ

ಶ್ರೀ ಗೋಮಟಂ ನಿಮಗೆಲ್ಲರ್ಗಂ ಇಷ್ಟಾರ್ಥಸಂಸಿದ್ಧಿಯಂ ಮಾಳ್ಕೆ.
ಭಗವನ್, ಶ್ರೀ ಗೋಮಟಸ್ವಾಮಿ!

ತನು ನಿನ್ನ ಪಾದಪೂಜೆಯ ಮಾಡಲೊಪ್ಪಿತು
ಮನ ನೆನಹಿನೊಳೈಕ್ಯವಾಯ್ತು
ವಿನುತ ಸ್ತುತಿಗಳಿಗೆ ವಚನವಡಕವಾಯ್ತು
ನನಗೆ ಬೇರಿಲ್ಲ ಸ್ವತಂತ್ರ

ಪರಮ ಪದಾಬ್ಜಕ್ಕೆರಗಿದಕ್ಷಿಗಳೆಂಬ
ಪರಮೆಗಳ್ಪುಣ್ಯಬಂಡುಂಡು
ವರಲಾವಣ್ಯಜಲದಿ ನಾಂದು ಭಾರೈಸಿ
ಬರದಿವೆ ಗೋಮಟಜಿನಪ

**ಕವಿರತ್ನ**

ಪಸರಿಸಿದ ಕುತೀರ್ಥಧ್ವಾಂತಮುಂ ತೂಳ್ದಿ ಭವ್ಯ-
ಪ್ರಸರಕಮುಲಬೋಧಾವಾಪ್ತಿಯಂ ತಾಳ್ದಿ ಪೆಂಪಿಂ
ವಿಶದವಿಭವತೇಜಶ್ಚಕ್ರಮರ್ಕಂಬೊಲುದ್ಯೋ-
ತಿಸುಗೆ ಸಕಲಧಾತ್ರೀಚಕ್ರದೊಳ್ ಧರ್ಮಚಕ್ರಂ

**ಸರ್ವರು**

ಮಂಗಳವಾಗಲಿ ಧರೆಗೆಲ್ಲ ಭವ್ಯಜ-
ನಂಗಳಿಗಭಿವೃದ್ಧಿಯಾಗಿ
ಕಂಗೊಳಿಸುವ ಜಿನಧರ್ಮ ಬೆಳಗಲಂತ-
ರಂಗದೊಳಗೆ ಭೂಭುಜರ

[ಇದು ಭರತವಾಕ್ಯ]

## ಆಕರಗಳು

ಅನಂತಕವಿ—ಬೆಳ್ಗೊಳದ ಗೊಮ್ಮಟೇಶ್ವರ ಚರಿತ್ರೆ.
ಬೊಪ್ಪಣ—ಶ್ರವಣಬೆಳ್ಗೊಳದ ಶಾಸನ 234.
ಚಾವುಂಡರಾಯ—ಚಾವುಂಡರಾಯ ಪುರಾಣ.
ಶ್ರವಣಬೆಳ್ಗೊಳದ ಶಾಸನಗಳು.
ಶ್ರೀ ಕವಿರತ್ನ—ಅಜಿತಪುರಾಣ.
ಆಂಡಯ್ಯನ ಕಬ್ಬಿಗರ ಕಾವ, ಮಧುರನ ಗೊಮ್ಮಟಾಷ್ಟಕ.
ಚದುರ ಚಂದ್ರಮನ ಕಾರ್ಕಳದ ಗೊಮ್ಮಟೇಶ್ವರ ಚರಿತ್ರೆ.

**ಪ್ರಸ್ತಾವನೆ:** ಮೊದಲಿನ ಮೂರು ಸಾಂಗತ್ಯ ಅನಂತಕವಿಯವು. ಕಡೆಯ ಮೂರು ವೃತ್ತ ಕಂದ ಬೊಪ್ಪಣನವು.

**ಪ್ರವೇಶ ೧:** 'ಪಲವುಂ ನಾಲಗೆ'—ಆಂಡಯ್ಯ. 'ಚಂಡಪ್ರತಾಪ, ಸುರಶೈಲಂ, ಚಲದಿಂ'—ಚಾವುಂಡರಾಯ. ಸಾಂಗತ್ಯಗಳೆಲ್ಲ ಅನಂತಕವಿಯವು.

**ಪ್ರವೇಶ ೨:** 'ಬ್ರಹ್ಮಕ್ಷತ್ರ'—ಶ್ರ. ಬೆ. ಶಾಸನ 281. ಬಿರುದಾವಳಿ—ಚಾವುಂಡರಾಯ. 'ಶ್ರೀಮತ್, ಭದ್ರಂ'—ಶಾಸನಗಳು. 'ಎಮ್ಮನಿದೇಕೆ, ಕ್ರಮದಿಂ, ಧೃತಜಯ, ಚಿರಕಾಲಂ, ಕೇಳಲ್ಕಪ್ಪುದು'—ಬೊಪ್ಪಣ. ಸಾಂಗತ್ಯಗಳೆಲ್ಲ ಅನಂತಕವಿಯವು.

**ಪ್ರವೇಶ ೩:** 'ಜನದಿಂ'—ಬೊಪ್ಪಣ. ಸಾಂಗತ್ಯಗಳೆಲ್ಲ ಅನಂತಕವಿ.

**ಪ್ರವೇಶ ೪:** 'ಉಪಸರ್ಗೇ' — ಸಮಂತಭದ್ರನ ರತ್ನಕರಂಡಕ. 'ಸಮ್ಯಕ್ತ್ವಂ'—ಆಶಾಧರನ ಧರ್ಮಾಮೃತ. ಉಳಿದವಕ್ಕೆ ಶ್ರ. ಬೆ. ಶಾಸನ 5, 6, 9, 12, 27, 28, 31, 88.

**ಪ್ರವೇಶ ೫:** ಸಾಂಗತ್ಯಗಳೆಲ್ಲ ಅನಂತಕವಿಯವು.

**ಪ್ರವೇಶ ೬:** ಕಂದ, ವೃತ್ತ, ಬಿರುದಾವಳಿಗಳು—ಕವಿರತ್ನ.

**ಪ್ರವೇಶ ೭:** 'ಪ್ರತಮುಂ, ಅತಿತುಂಗ, ಸಮ್ಮದ'—ಬೊಪ್ಪಣ. ಕನ್ನಡಿಗರ, ತಮಿಳರ, ಮಹಾರಾಷ್ಟ್ರೀಯರ ಘೋಷ—ಶ್ರ. ಬೆ. ಶಾಸನ 175, 176, 179. 'ಶ್ರೀ ಪಾದಾಂಭೋಜ'—ಮಧುರ. 'ಪುರುದೇವ, ಪೊನ್ನಿಗ, ಭ್ರಾಂತೇನ್, ಎನಿತುಂಟು, ಪೆಜವುಳಿ, ಎನಿತೊಳವು, ಪೆಸರ್ಗೊಂಡು, ಗುರುಗಳ್, ಪಸರಿಸಿದ'—ಕವಿರತ್ನ. 'ಮಂಗಳವಾಗಲಿ'—ಚದುರ ಚಂದ್ರಮ. ಉಳಿದ ಸಾಂಗತ್ಯಗಳೆಲ್ಲ ಅನಂತಕವಿಯವು.

# ಟಿಪ್ಪಣಿಗಳು

(ಆರಂಭದ ಸಂಖ್ಯೆಗಳು ಪುಟಗಳನ್ನು ತೋರಿಸುತ್ತವೆ.)

೧೯. ಪ್ರಸ್ತಾವನೆ—ನಾಟಕದ ಆರಂಭ, ಪ್ರವೇಶ; ಸೂತ್ರಧಾರನು ನಾಟಕದ ವಸ್ತುವನ್ನು ಸೂಚಿಸುವ ಭಾಗ. ವೃಷಭಸೇನ—ಮೊದಲನೆಯ ತೀರ್ಥಂಕರ. ಮಹಾವೀರ—ಕಡೆಯ ತೀರ್ಥಂಕರ. ಜಿನ, ಜಿನಪತಿ, ತೀರ್ಥಂಕರ ಇವು ಪರ್ಯಾಯಪದಗಳು. ಭವ್ಯಾವಳಿ—ಜೈನದರ್ಶನದಲ್ಲಿ ಶ್ರದ್ಧೆಯುಳ್ಳವರ ಸಮೂಹ. ಚತುರ್ವಿಂಶತಿ ದೇವರ್—ಜೈನರ ಇಪ್ಪತ್ತನಾಲ್ಕು ತೀರ್ಥಂಕರರು. ರತ್ನತ್ರಯ—ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ ಮತ್ತು ಸಮ್ಯಕ್‌ಚಾರಿತ್ರ. ಆದಿಬ್ರಹ್ಮ—ಮೊದಲನೆಯ ಜಿನ. ಅಗಾಧಬೋಧ—ಕೇವಲಜ್ಞಾನ. ದುರ್ವಾರ . . . ಗ್ರೇಸರಂ—ನಿವಾರಿಸಲು ಕಠಿನವಾದ ಸಂಸಾರವನ್ನು ಕತ್ತರಿಸುವ ಉಪಾಯದಿಂದ ಕೂಡಿದ ಒಳ್ಳೆಯ ಮಾತುಗಳ (ವೃಷ) ಧರ್ಮಮಾರ್ಗಕ್ಕೆ ಮೊದಲಿಗನು. ಪಾಪಹೃತ್—ಪಾಪನಾಶಿ. ಅವಾಪ್ತಿ—ಪ್ರಾಪ್ತಿ. ಗೊಮ್ಮಟ—ಬಾಹುಬಲಿ. ಅಮೇಯ—ಅಳತೆಗೆ ಸಿಕ್ಕದವನು. ಮೆಯ್ವೊಣರ್—ಮಲ್ಲಯುದ್ಧಮಾಡು. ಆಜಿದೆ—ಕೈಲಾಗದೆ. ಅಕ್ರಮ—ಅಧರ್ಮ. ನಿಃಪ್ರಭ—ಕಳೆಕುಂದಿದ್ದು. ಕರ್ಮಾರಿವಿಧ್ವಂಸಿ—ಜೀವವನ್ನು ಸಂಸಾರದಲ್ಲಿ ಕಟ್ಟಿಹಾಕುವ ಕರ್ಮಗಳೆಂಬ ಶತ್ರುಗಳನ್ನು ನಾಶಮಾಡಿದವನು. ಪುರುಸೂನು—ಮೊದಲನೆಯ ಜಿನನಾದ ಪುರುದೇವನ ಮಗನಾದ ಬಾಹುಬಲಿ. ಮಾನೋನ್ನತ—ಅತ್ಯಂತ ಅಭಿಮಾನಶಾಲಿ. 'ಕ್ರಮದಿಂ ಮೆಯ್ವೊಣರ್ದು' ಎಂಬ ವೃತ್ತದಲ್ಲಿ ಬಾಹುಬಲಿಯ ಸಮಸ್ತ ಕಥೆಯೂ ಅಡಕವಾಗಿದೆ.

೨೦. ಆರ್ಯಮಿಶ್ರರು—ಯೋಗ್ಯರು, ಗಣ್ಯರು. ನೇಪಥ್ಯ—ತೆರೆಯ ಒಳಗೆ. ಪಱೆ—ತಂಬಟೆ. ಬರಿಸ—ವರ್ಷ. ಅಚ್ಕಱ್—ಪ್ರೀತಿ, ಅನುರಾಗ. ಮೊಗಸಿದನ್—(ಬರಲು) ಇಚ್ಛಿಸಿದನು. ಅಱಿಕೆಯ—(ಆಗಮನವನ್ನು) ತಿಳಿಸುವ. ಕ್ಷತ್ರಚಕ್ರ—ಕ್ಷತ್ರಿಯರ ಮಂಡಲ. ಚಕಿತ—ಬೆಚ್ಚಿದ. ವಿನಮ್ರ—ಬಾಗಿದ, ಅಡ್ಡಬಿದ್ದ. ದೀಪ . . . —ತನ್ನ ಬೆಳಗುವ ಕಾಂತಿಯಿಂದ ಸೂರ್ಯಮಂಡಲದ ತೀವ್ರವಾದ ಕಿರಣಮಾಲೆಯನ್ನು ಅಡಗಿಸಿದ. ದಿಕ್ಚಕ್ರ—ಎಂಟು ದಿಕ್ಕುಗಳು. ಉಪಾಂತ—ಹೊರ ಅಂಚು.

೨೧. ಗಣಬದ್ಧದೇವರ್—ಚಕ್ರದ ಕಾವಲಿನ ದೇವತೆಗಳು. ಬದ್ಧಭ್ರುಕುಟಿಯಾಗಿ—ಹುಬ್ಬು ಗಂಟಿಕ್ಕಿ. ಎಲ್ಲಿದರ್—ಎಲ್ಲಿದ್ದಾರೆ? ಮಾಣ್ದು—ತಡೆದು. ಅದಟನ್ ಅನ್ನನ್—ಅಂಥ ವೀರ. ಕಾಲಚಕ್ರ—ವಿನಾಶಕಾಲ. ಓವದೆ—ಸ್ವಲ್ಪವೂ ದಯೆ ತೋರದೆ. ಆವಿರ್ಭೂತ—ಅದರಿಂದ ಹುಟ್ಟಿದ. ದವಾನಳ—ಕಾಡುಕಿಚ್ಚು. ಇಂ—ಇನ್ನು ಮೇಲೆ. ಚಕ್ರಿವೇೞ್ಕುಮೆ—ಚಕ್ರವರ್ತಿಗೆ ಹೇಳಿ ಕಳಿಸಬೇಕೆ? ತಳ್ತು ಇಱಿದು—

ಲ್ಪಟ್ಟ ಭೂಮಿ. ಬಹಿರ್ಮಂಡಲ—ಹೊರಗಿನ ರಾಜರು. ಸಮೆಜು—ಸರಿಪಡಿಸು. ಇನಿತು ಬರಿಸ—ಇಷ್ಟು ವರ್ಷ. ಅಂತರ್ಮಂಡಲಸಾಧನ—ಒಳಗಿನ ದೊರೆಗಳನ್ನು ಸಾಧಿಸಬೇಕಾದದ್ದು. ಅನ್ವಯ—ವಂಶಪರಂಪರೆಯಾಗಿ ಬಂದ. ಪುರುತನಯರೆಂ—ಪುರುದೇವನ ಮಕ್ಕಳಾಗಿದ್ದೇವೆ. ಪೊರೆಯುಂಟೆ ತನಗೆ—ತನಗೆ ಅಂಟುತ್ತದೆಯೆ, ದಕ್ಕುತ್ತದೆಯೆ? ಬಾಳ್ವೆಂ ನಿಜಗೆಮ್ಮ—ಬದುಕುತ್ತೇವೆ, ಬಾಗುವುದಿಲ್ಲ. ಮಾನೋನ್ನತ—ತುಂಬ ಅಭಿಮಾನಿ. ಅಣಂ—ಸ್ವಲ್ಪವೂ. ಅಗ್ಗಳದ ಅದಟ—ಅತಿಶಯ ವೀರ. ಮುನ್ನ—ಮೊದಲೇ. ಆದಿಬ್ರಹ್ಮ—ಮೊದಲನೆಯ ಜಿನ. ಇನಿವಿರಿದು—ಇನಿತು ಹಿರಿದು, ಇಷ್ಟು ವ್ಯತ್ಯಾಸ. ಬಳ್ದಿರ್ದಂ—ಬಲಿತು (ಹೆಚ್ಚಿ) ಕೊಂಡಿದ್ದಾನೆ. ಕೆಚ್ಚನೆ—ಕೆಂಪಗೆ. ಒದವಿಸು—ಉಂಟುಮಾಡು. ಮನಕ್ಕೆವರೆ—ಮನಸ್ಸಿಗೆ ಬೇಕಾದಂತೆ. ಮದನುಜ . . . . —ನನ್ನ ತಮ್ಮಂದಿರು ನನಗೆ ಸ್ವಲ್ಪವೂ ಎರಗುವುದಿಲ್ಲ, ಅಲ್ಲವೆ?

೨೪. ಇನಿಸಾನುಂ ಬೇಗ—ಒಂದಿಷ್ಟು ಹೊತ್ತು. ರಾಜವತಿ—ಹೆಸರಿಗೆ ಮಾತ್ರ ದೊರೆಯಾದವನು ಇರತಕ್ಕದ್ದು. ರಾಜನ್ವತಿ—ಸದ್ಧರ್ಮದಿಂದ ಆಳುವ ರಾಜನನ್ನು ಉಳ್ಳದ್ದು. ಪೊಡರ್—ಕಾಣಿಸಿಕೊಂಡು ಮೆರೆ. ಮೇಣ್—ಅಥವಾ. ಬಗೆ—ಮನಸ್ಸು. ಮಿಗೆ—ಹೆಚ್ಚಲು. ವನಂಬುಗು—ಕಾಡನ್ನು ಪ್ರವೇಶಿಸು. ಶಾಸನಧರ—ಆಜ್ಞೆಯನ್ನು ಹೊತ್ತು ಬರುವವನು. ನಾಸಾಪುಟ—ಮೂಗಿನ ಹೊಳ್ಳೆ. ಆತಾಮ್ರ—ಎಲ್ಲ ಕೆಂಪಾದ. ದಶನವಸನ—ಹಲ್ಲನ್ನು ಮುಸುಕಿರುವ ತುಟಿ. ಉಪಭೋಗ್ಯ—ಅನುಭವಿಸಲು ಅರ್ಹವಾದದ್ದು. ವಸುಧಾ—ಭೂಮಿ. ಒರಂತೆ—ಒಂದೇಸಮನಾಗಿ, ಅದೇರೀತಿ. ಈಶಶಾಸನ—ಚಕ್ರವರ್ತಿಯ ಆಜ್ಞೆ. ಕೊಂಡಾಟ—ಪ್ರಶಂಸೆ. ಸಾಲ್ವುದು—ಯುಕ್ತ. ತಾಮುಂ ಆಮುಂ—ನೀವೂ ನಾವೂ. ನೆತ್ತಿಯೊಳ್ ಆಂತು—ಶಿರಸಾ ವಹಿಸಿ. ಎಱಗಿಂ—ನಮಸ್ಕಾರ ಮಾಡಿರಿ.

೨೫. ಪೊಱಗು—ಒಳಪಡದ್ದು. ಏವುದೊ—ಏನು ಪ್ರಯೋಜನವೊ? ಸುಭಟ . . . .—ಯುದ್ಧದಲ್ಲಿ ವೀರರ ಮೇಲೆ ಬಿದ್ದು ಅವರ ಬಾಹುಬಲವನ್ನು ನಾಶಮಾಡುವ ಆಟದಲ್ಲಿ ಅಭಿಲಾಷೆಯುಳ್ಳವನು. ವಿದ್ವಿಷ . . . —ಶತ್ರುಗಳೆಂಬ ಆನೆಗಳ ಕೊಂಬು ಎಂಬ ಕಂಬಗಳನ್ನು ಅನಾಯಾಸದಿಂದ ಕಿತ್ತುಹಾಕುವ ಅಡಗಿಸಲಾರದ ಆಸೆಯುಳ್ಳವನು. ದುರ್ಜಯ . . . . —ಜಯಿಸಲು ಕಷ್ಟವಾದ ಶತ್ರುರಾಜರ ಮೇಲೆದ್ದ ತಲೆಗಳನ್ನು ಎಳೆದು ಬಗ್ಗಿಸಬೇಕೆಂಬ ದುರ್ಧರವಾದ ಬಯಕೆಯುಳ್ಳವನು. ದುರ್ಲಲಿತ . . . . —ಮುದ್ದು ಮಾಡಿ ಕೆಟ್ಟುಹೋದವರು ಮಾತಾಡಿಕೊಂಡು ಅವನ ಮನೆಯಲ್ಲಿ ಸೇರುತ್ತಾರೆ. ಏವನ್ ಎಮಗೆ—ನಮ್ಮನ್ನು ಏನುಮಾಡುತ್ತಾನೆ? ಅವಷ್ಟಂಭ—ಅವಲಂಬನ, ಬೆಂಬಲ. ಉಱದೆ—ಲಕ್ಷ್ಯಮಾಡದೆ. ಬಾಯ್ಕೇಳಿಸು—ಹೇಳಿದಂತೆ ಕೇಳುವ ಹಾಗೆ ಮಾಡು, ವಿಧೇಯನಾಗಿಸು. ಉದ್ಭಟ—ಉತ್ಕೃಷ್ಟ. ಆರಭಟೀರಸರ್—ಅದ್ಭುತವನ್ನೂ ಭಯವನ್ನೂ ಉಂಟುಮಾಡುವವರು. ಸೆಣಸು—ಯುದ್ಧಮಾಡು.

ವಾರಣ ಘಟೆ—ಆನೆಗಳ ಹಿಂಡು. ನಿನತು ಒಂದು ಓಲೆ—ನಿನ್ನ ಒಂದು ಪತ್ರ. ಮನೆ ವಾರ್ತೆ—ಗೃಹಕೃತ್ಯ. ಬಳೆಯೆ ನುಡಿ—ದೀರ್ಘವಾಗಿ ಮಾತಾಡು. ಶಾಸನಹಾರಿ—ಸುದ್ದಿ ತರುವವನು.

೨೬. ಜೈತ್ರಾಸ್ತ್ರ—ಜಯ ದೊರಕಿಸುವ ಚಕ್ರರತ್ನವುಳ್ಳವನೆ. ಆದೇಶ—ಹೇಳಿ ಕಳಿಸಿದ್ದು, ಆಜ್ಞೆ. ಅವಧಾರಿಸು—ಮನಸ್ಸಿಟ್ಟು ಕೇಳು. ಆಳ್ ಅರಸು—ಸೇವಕ ಸ್ವಾಮಿ. ವಿಭೇದ—ವ್ಯತ್ಯಾಸ. ಎಜಕ—ಎರಗುವಿಕೆ. ಕಷ್ಟ—ಹೀನಾಯ. ವಸುಂಧರೆ—ಭೂಮಿ. ಮಡಗೂಳ್—ಭುಕ್ತೋಚ್ಛಿಷ್ಟ, ತಿಂದು ಮಿಕ್ಕಿದ್ದು. ಪರಿಚ್ಛೇದಿಸಿ—ವಿಚಾರಮಾಡಿ ನಿಶ್ಚಯಿಸಿ. ಕುಳಿಶಾಸ್ತ್ರ—ವಜ್ರಾಯುಧನಾದ ಇಂದ್ರ. ಉತ್ತಂಸಿತ—ತಲೆಯಕಿರೀಟವನ್ನುಳ್ಳ. ಪದನಳಿನ—ಪಾದಕಮಲವುಳ್ಳವನು. ಪುರುಷಾರ್ಥ—ಧರ್ಮಾರ್ಥಕಾಮಗಳ ತುದಿಯ ಮುಕ್ತಿ. ಪಳಾಳಭಾರ—ಟಕ್ಕಿನಿಂದ ವಹಿಸಿಕೊಂಡದ್ದು. ಪರಿತ್ಯಕ್ತ . . . . —ತಮ್ಮ ರಾಜ್ಯಗಳನ್ನು ತೊರೆದುಬಿಡಲು ನಿಶ್ಚಯಿಸಿ. ಸಮವಸರಣ ಭೂಮಂಡಲ—ಜಿನಸ್ವಾಮಿಯ ಧರ್ಮಸಭೆಯ ಮಂಟಪ. ಆದರ್ ಗಡ—ಆದದ್ದು ನಿಜವೆ! ಕುಡೆ—ಕೊಡಲಾಗಿ. ಮೇಳ—ಸಂಬಂಧ. ಜಡಿ—ಮಾತಿನಿಂದ ಹೆದರಿಸು, ಗದರಿಸು. ಪರಮ—ತೀರ್ಥಂಕರ. ಪೆಜರ್ಗೆ—ಇತರರಿಗೆ. ಮಕುಟ—ಕಿರೀಟ. ಅವಯವದೆ—ಸರ್ವಾಂಗದಿಂದ, ಸಾಷ್ಟಾಂಗವಾಗಿ. ನಿರ್ವೇಗ ಪರಾಯಣರಾಗಿ—ಉದ್ವೇಗಗಳಿಲ್ಲದೆ ಶಾಂತಚಿತ್ತರಾಗಿ.

೨೭. ಪರಿಭವ—ಅವಮಾನ. ಬರ್ಪ ಅರಸು—ಆಗುವ ದೊರೆತನ. ಪೂಣ್ದರ್—ಪ್ರತಿಜ್ಞೆ ಮಾಡಿದರು. ಅನಿಬರುಂ—ಅಷ್ಟುಮಂದಿಯೂ. ನೆಗಟ್ದ—ಪ್ರಖ್ಯಾತವಾದ. ಪುರಾಣ—ಹಿಂದಿನ ಕಾಲದ. ಅವಿಹತಗತಿ—ಅಸ್ಖಲಿತಗತಿ, ಹಿಡಿದದ್ದನ್ನು ಬಿಡದೆ. ಮುನ್ನ—ಈ ಮೊದಲು. ಅನ್ವವಾಯ ಭೂಧರ—ವಂಶವೆಂಬ ಪರ್ವತ. ಮುಂತೆ—ಮುಂದೆ. ಬಟ್ಟೆ—ದಾರಿ. ಚಲದೆ—ಹಟದಿಂದ. ಭುವನಗುರು—ಲೋಕಕ್ಕೆ ದೊಡ್ಡವ, ಜಿನ. ಅಗ್ಗಳ—ಮೀರಿಸಿದವನು. ಖರಕಿರಣ—ಸೂರ್ಯ. ಸ್ಫುರಿತ—ಕಿರಣ ಕೆದರುವಿಕೆ. ಸೆಣಸು—ಹೋರಾಟ. ಮಾಜು—ಎದುರಾಗಿ. ಅಳವಡಿಸಿ—ಹೊಂದಿಸಿಕೊಂಡು. ಪದವಡು—ಕಾಲಿಗೆ ಬೀಳು. ಉನ್ಮಯೂಖ—ತುಂಬ ಪ್ರಕಾಶವುಳ್ಳ. ಪ್ರಭೂತ—ಅಪರಿಂದಾಪ. ಸಂಧಿವಿಗ್ರಹಿ—ಪರಮಂಡಲಗಳೊಡನೆ ಸಂಧಿಯನ್ನಾಗಲಿ ಯುದ್ಧವನ್ನಾಗಲಿ ಏರ್ಪಡಿಸುವ ಉನ್ನತಾಧಿಕಾರಿ.

೨೮. ದೌವಾರಿಕ—ದ್ವಾರಪಾಲಕ. ಮಂಡಪ—ಮಂಟಪ. ಜನಪದ . . . . —ದೇಶದ ಒಳ್ಳೆಯ ಕುಲದಲ್ಲಿ ಹುಟ್ಟಿದವನು. ಅನ್ವಯಾಗತ—ವಂಶಪರಂಪರೆಯಿಂದ ಆ ಅಧಿಕಾರದಲ್ಲಿ ಬಂದವನು. ಅಭಿರೂಪ—ಸುಂದರ. ಪ್ರತ್ಯುತ್ಪನ್ನ ಪ್ರತಿಭ—ಆಯಾ ಹೊತ್ತಿಗೆ ತಕ್ಕದ್ದನ್ನು ಆ ಗಳಿಗೆಯಲ್ಲೇ ತಿಳಿಯಬಲ್ಲವನು. ವಕ್ರೋಕ್ತಿನಿಪುಣ—ಆಡುವುದನ್ನು ಮುಚ್ಚಿ ವ್ಯಂಗ್ಯವಾಗಿ ಸೂಚಿಸಬಲ್ಲವನು. ಆದೇಯ ವಚನ—ಮಾತು ಬಲ್ಲವ.

ಅನುದ್ಧತ—ಸೌಮ್ಯವಾದದ್ದು. ಪರಿಚಿತ ಅಶೇಷ ದೇಶಭಾಷನ್—ಒಂದು ಬಿಡದಂತೆ ಎಲ್ಲಾ ದೇಶಭಾಷೆಗಳನ್ನು ತಿಳಿದವನು. ಅತ್ತಣ್ಗೆ—ಆ ಕಡೆಗೆ. ದಿಟ್ಟಯಟ್ಟ—ದೃಷ್ಟಿಸಿ. ಮರಕತ ನಗ—ಪಚ್ಚೆಯ ಪರ್ವತ. ಆದಿಬ್ರಹ್ಮ—ಮೊದಲನೆಯ ಜಿನ. ಹರಿನ್ಮಣಿ ವರ್ಣ—ಪಚ್ಚೆಯ ಕಲ್ಲಿನ ಬಣ್ಣವವನು. (ಬಾಹುಬಲಿಯ ಮೈಯ ವರ್ಣ ಪಚ್ಚೆ.) ಉಳ್ಕುಗುಂ—ಕೋರೈಸುತ್ತದೆ. ದೊರೆ—ಸಮಾನನಾದವನು. ಚಕ್ರಿಗಂ ಎಸೆಯದು—ಚಕ್ರವರ್ತಿಯಲ್ಲೂ ಕಂಡುಬರುವುದಿಲ್ಲ. ನೆಗಱ್—ಎಲ್ಲಕಡೆ ಹರಡುವಂತೆ. ನೆಗಱ್ದ—ಪ್ರಸಿದ್ಧವಾದ.

೨೯. ಎಂತಾನುಂ—ಹೇಗಾದರೂ. ಬಹುಚಿಂತಂ—ಹಲವಾರು ಯೋಚನೆಗಳುಳ್ಳವ. ಆದಂತು ಎಡಱದೆ—ಆದಷ್ಟು ನಿರ್ವಿಘ್ನವಾಗಿ. ಎಯ್ದೆ—ಸಾಂಗವಾಗಿ. ಸಂತಮೆ—ಕ್ಷೇಮವೆ? ದಕ್ಷಿಣಭುಜ—ಬಲತೋಳು. ಬಾಯ್ಕೇಳ್ದರ್—ವಿಧೇಯರಾದರು. ಆಶಾಂತರ—ದಿಕ್ಕುಗಳ ಒಳಭಾಗ. ಅಳ್ಕಿದುವು—ಹೆದರಿದುವು. ರಾಗಿಸು—ಸಂತೋಷಪಡು. ತೊದಳ್—ಸುಳ್ಳು, ಅನಿಶ್ಚಯ. ಆದಂ—ತುಂಬ. ದಿಙ್ಮಾತ್ರ ವರ್ಣನಂ—ಸ್ಥೂಲವಾಗಿ ಹೇಳುವುದು. ಉಂತೆ ಅದು ಎನ್ನ ಅಳವೇ—ಸುಮ್ಮನೆ ಅದು ನನ್ನಿಂದ ಸಾಧ್ಯವೆ? ಕೇವಲ ಜ್ಞಾನ—ಮುಕ್ತಿಯನ್ನು ಕೊಡುವ ಸಂಪೂರ್ಣ ಜ್ಞಾನ. ಪ್ರಾಜ್ಯ—ಸಮೃದ್ಧ, ಉತ್ಕೃಷ್ಟ. ನಿರ್ವರ್ತಿಸು—ಮಾಡಿ ಮುಗಿಸು. ನಿಜ ಪ್ರತಾಪದ ಅಳವು—ತನ್ನ ಸಾಮರ್ಥ್ಯದ ಅಳತೆ. ಮಾಱಾಂಪ—ಎದುರು ನಿಲ್ಲುವ. ಜಟ್ಟಿಗರ್—ವೀರರು. ಆಶಾಚಕ್ರ—ಸುತ್ತಿನ ಎಲ್ಲ ದಿಕ್ಕುಗಳು. ಸಾಲ್ದಿರೆ—ಸಾಕಾಗಿರಲು. ಪೆಂಪು—ಅತಿಶಯ. ಅಪರ—ಪಶ್ಚಿಮ. ಪಾರಾವಾರ—ಸಮುದ್ರ. ವರೂಥ—ರಥ. ನುಗುಳ್ದು—ನುಸುಳಿಕೊಂಡುಹೋಗಿ. ತತ್ ವ್ಯಂತರ ಅಮರ ಆವಾಸ—ಆ ವ್ಯಂತರರೆಂಬ ದೇವತೆಗಳ ಲೋಕ. ಉರಿಪಿದನ್—ಸುಟ್ಟನು. ಕುಲಧನ—ವಂಶದ ಐಶ್ವರ್ಯ. ಕೆಯ್ಗೆಮಾಡು—ವಶಪಡಿಸಿಕೊ. ಅಲ್ಲಿಂಬಳಿಂ—ಆಬಳಿಕ, ಅನಂತರ.

೩೦. ಅಗಿದು—ಹೆದರಿ. ಆನತನಾಗು—ಅಡ್ಡಬೀಳು. ತಮಿಸ್ರ—ಕತ್ತಲೆ. ಪಡಿ—ಬಾಗಿಲು. ಪೆಱಗೆ ಇಕ್ಕಿ—ಹಿಂದೆ ಬಿಟ್ಟು, ಅದನ್ನು ದಾಟಿ. ಬಳಕಾವರ್ತರು—ಒಂದು ತೆರದ ಮೇಘಕುಮಾರರು. ತೂಳ್ದು—ದೂಡಹೋಗುವಂತೆ. ಬೆಸಕೆಯ್ದತ್ತು—ವಿಧೇಯವಾಯಿತು. ಅಪ್ರತಿಹತ—ಎದುರಿಲ್ಲದೆ, ಎಲ್ಲೂ ಸೋಲದ. ಟಂಕೋತ್ಕೀರ್ಣಂಮಾಡು—ಉಳಿಯಿಂದ ಕೆತ್ತಿಸು. ಅಪಸೀತ—ಕಳೆದ, ಬಿಚ್ಚಿದ. ಬಾಜಿಸು—ಓದು. ಉಪಾಯನ ರತ್ನಕರಂಡಕ—ಮೆಚ್ಚಿ ಕಳಿಸಿದ ರತ್ನಗಳು ತುಂಬಿದ ಪೆಟ್ಟಗೆ. ತತ್ ಅಂತಸ್ಸ್ಥಿತ—ಅದರ ಒಳಗಿರುವ. ಹಸ್ತನ್ಯಸ್ತ—ಕೈಯಲ್ಲಿ ಇಟ್ಟದ್ದು. ಭೂವಲ್ಲಭ . . . .—ಚಕ್ರವರ್ತಿಯು ಹುಬ್ಬನ್ನು ಮೇಲೆತ್ತಿ ಆಡಿಸಿ ಕೊಟ್ಟಿರುವುದನ್ನು ಓದುವುದರಲ್ಲಿರುವ ಸುದ್ದಿ ಇದು. ಭಾವಿಸಿಂ—ಮನಸ್ಸಿಟ್ಟು ಕೇಳಿ. ಸಮಸ್ತವಿಷ್ಟಪ . . . .—ಎಲ್ಲ ಲೋಕಗಳಿಗೂ ಒಡೆಯನಾದ ಪುರದೇವನ ಚರಣಕಮಲಗಳ ದೂಳಿಸಿಂದ

ಕಂಗೊಳಿಸುವ ರತ್ನಕಿರೀಟದ ಪ್ರಭಾಮಂಡಲವುಳ್ಳವನು. ಚಕ್ರ . . . .—ಚಕ್ರರತ್ನದ ಕಾಂತಿಯಿಂದ ಎಲ್ಲಾ ದಿಕ್ಕುಗಳನ್ನೂ ಮುಸುಕಿದವನು.

೩೧. ಕನಕ . . . .—ಚಿನ್ನದ ತಗಡುಗಳನ್ನು ಮೆಟ್ಟಿದ ಜಿಲ್ಲೆಂಬ ಬಳ್ಳಿಗೆ ಅವಲಂಬನಗಳಾದ. ವಿಜಯ . . . .—ವಿಜಯೋತ್ಸವಕ್ಕೆ ತೋರಣ ಕಟ್ಟುವ ಕಂಬಗಳಾದ. ವೀರಶ್ರೀ . . . .—ವೀರಲಕ್ಷ್ಮಿಯೆಂಬ ಹೆಣ್ಣುಹಾವು ಚೆನ್ನಾಗಿ ಆಶ್ರಯಿಸುವ ಶ್ರೀಗಂಧದ ಕಾಂಡಗಳೂ ಆದ. ದೋರ್ದಂಡ—ಬಾಹುದಂಡ. ಅಣುಗದಮ್ಮ—ಪ್ರೀತಿಯ ತಮ್ಮ. ಬಿಮ್ಮನೆ—ಬಿಂ ಎಂದು, ಶೂನ್ಯವಾಗಿ. ಆದ ಎಱಕಮುಂ—ಅವರಿವರು ವಿನೀತರಾದದ್ದೂ. ಸಹಜಂ—ಹೃತ್ಪೂರ್ವಕವಾದದ್ದು. ಕೃತ್ರಿಮಂ—ಕೇವಲ ತುಟಿಯ ತುದಿಯದು. ಮನದೆಗೊಳಿಸು – ಮನಸ್ಸನ್ನು ಆಕರ್ಷಿಸು, ಮೆಚ್ಚಿಸು. ನಿನಗೆ ಒಳವು—ನಿನಗೆ ಇವೆ. ದೂತವಚನ . . . . .—ದೂತನ ಮಾತನ್ನು ಕೇಳಿ ಉಂಟಾದ ಕೋಪದಿಂದ ಉಕ್ಕಿ ಚರ್ಮವನ್ನು ತೂರಿಬಂದ ಜಲಧಾರಾಸಾರದಿಂದ ಭಯಂಕರವಾಗುವಂತೆ ಕೆಂಪಾದ ಕೆನ್ನೆಗಳುಳ್ಳದ್ದೂ. ಉದ್ದೀಪನ . . .—ಕೆರಳಿ ಮಾಂಸವುಬ್ಬಿದ ಕೆನ್ನೆಯಲ್ಲಿ ಉಕ್ಕಿದ ಅತಿಯಾದ ಮದಜಲದ ಕ್ರೂರಕಾಂತಿಯಿಂದ ಭೀಕರವಾಗುವಂತೆ ಕೆಂಪಾದ ಗಂಡಸ್ಥಳವುಳ್ಳದ್ದೂ. ಗಂಧಸಿಂಧುರ—ಮದದಾನೆ. ಕೋಪಗರ್ಭಸ್ಮಿತ—ಹೊಟ್ಟೆಯಲ್ಲಿ ಕೋಪವನ್ನಿರಿಸಿ ಹೊರಗೆ ಮಾತ್ರ ನಗುತ್ತಿರುವುದು. ನಿನ್ನ ಅಱಿವ ಅನಿತಂ—ನೀನು ತಿಳಿದಿರುವಷ್ಟನ್ನೂ. ನಮುಱಿಕೊಂಡ—ತಲೆಸವರುವ, ಪ್ರಸಲಾಯಿಸುವ.

೩೨. ನಿನ್ನನ್ ಆಳ್ದನ್—ನಿನ್ನ ಸ್ವಾಮಿ. ನಚ್ಚಿ—ನಂಬಿ. ಅನಾಕುಳಂ—ನಿರ್ಯೋಚನೆಯಿಂದ. ತಿರಿತಂದುದು—ಬೇಡಿ ತಂದದ್ದು. ಒಳಗು—ಗುಟ್ಟು, ಅಂತರ್ಯ, ರಹಸ್ಯ. ಉಣ್ಣಪಟ್ಟು—ಊಟಮಾಡದೆ ಮಲಗಿ. ನುಸುಳ್—ಜಾರಿಕೊ. ಕುಲಾಲ—ಕುಂಬಾರ. ತಿರಿ—ಅಲೆದಾಡು. ಬೞಿ—ಹಿಂದೆ. ತಿರಿ—ಅಲೆ, ಬೇಡು. ಕುಲಧರ—ಮನುಗಳು. ವಿಸಾಡಿ—ಬಾಣಗಳಿಂದ ಹೊಡೆದು. ತಿಣ್ಕು—ಆಯಾಸ. ಬೇಡವಡೆ—ಬೇಡರ ಸೈನ್ಯ. ಮುಸುಱಿ—ಮುತ್ತಿ. ಸುರುಳ್ದು—ಮುದುರಿಕೊಂಡು. ಅಗಿದು—ಹಿಮ್ಮೆಟ್ಟಿ. ಗೂಡುಗೊಳ್—ಅಡಗಿಕೊ, ಆಶ್ರಯಪಡೆ. ಪೂರ್ವ—ಹಿಂದಿನ. ಪರಿಹಸಿತಂ—ನಗೆಗೀಡು. ಬುಧಜನ—ತಿಳಿದಂಥವರು. ವಿಭು—ದೊರೆ. ಅೞಿಪಿ—ಅಳಿಸಿ, ನೀಗಿ. ಕಳಿಪಿ—ಕಳೆದುಕೊಂಡು. ಕಿಡೆಮಾಡು—ಹೀನೈಸು. ನಿಧನಮೆಯ್ದು—ನಾಶವಾಗು.

೩೩. ಕೀಱಿ—ಗೀರಿ, ಚುಚ್ಚಿ. ಬಾಳ್—ಕತ್ತಿ. ನಿರ್ದರಂ—ದಯಾದಾಕ್ಷಿಣ್ಯಗಳಿಲ್ಲದೆ. ಊಱಿ—ಒತ್ತಿ. ಅಂಜವೆ—ಭೀತಿ. ಸನಾಭಿಗಳ್—ನಾಭಿಯ ವಂಶದವರು. (ನಾಭಿರಾಜನು ಪುರುದೇವನ ತಂದೆ.) ಸಂಗತಂಗಳ್—ಹೊಂದಿಕೊಂಡವರು. ಪೆಸರ್ಗೊಂಡ ಅನಿತಱೊಳ್—ಹೆಸರುಪಡೆದ ಅಷ್ಟರಿಂದಲೇ. ಲೋಕದಿಂ ನಗಿಸುವೆನೇ—

ಲೋಕದ ನಗೆಗೆ ಗುರಿಯಾಗುವೆನೇ? ಸಿರಿ—ಭಾಗ್ಯ. ಗಂಟಜಿತೊಳ್—ದೂರದಿಂದಲೇ. ರಾಗಂಬೆರಸು—ಸಂತೋಷಪಡುತ್ತ. ನಣ್ಪು—ನಂಟು. ಬೆಸನ್ ಏನ್—ಆಜ್ಞೆಯೇನು? ಪಂಥ—ಸ್ಪರ್ಧೆ. ಅಡಕಿಲ್ವೆಸರ್—ಮೇಲೆ ಹೇರಿಕೊಂಡ ಹೆಸರು. ಕೆಮ್ಮನೆ—ಸುಮ್ಮನೆ, ವ್ಯರ್ಥವಾಗಿ. ದೊರೆಯಲ್ಲದನ್—ಸಮಾನನಲ್ಲದವನು. ಪುರುಳ್—ಸಾರ, ಸಾರ್ಥಕತೆ. ಎರಲೆ—ಜಿಂಕೆ. ಗೋರಿ—ಮೃಗಗಳನ್ನು ಮೋಹಗೊಳಿಸಲು ಹಾಡುವ ಹಾಡು. ಮೃಗ ವಿರೋಧಿ—ಸಿಂಹ.

೩೪. ದೊರೆಗೆವರು—ಸಮಸಮನಾಗಿ ನಿಲ್ಲು, ಹೋಲಿಸು. ಅಳವು—ಸಾಮರ್ಥ್ಯ. ತುಲಾದಂಡ—ತೂಗುವ ತಕ್ಕಡಿಯ ಕೋಲು. ಉದಾರ . . .—ದೊಡ್ಡದಾದ ವೀರಚರ್ಯೆಯಿಂದ ಯಾವಾಗಲೂ ಯುದ್ಧಮಾಡಿ ಕರ್ಕಶನಾದ ಕ್ಷತ್ರಿಯನಿಗೆ. ವಿಪಕ್ಷ . . .—ಶತ್ರುಗಳಾದ ಕ್ಷತ್ರಿಯರ ಪರಾಕ್ರಮವನ್ನು ಕೇಳಿದ್ದರಿಂದ ಆದ ಕ್ರೋಧದಲ್ಲಿ. ಅಳೀಕಭ್ರುಕುಟಿ—ಹುಬ್ಬನ್ನು ಕೆಳಗೆಳೆಯುವುದು. ಅನರ್ಥಕ . . .—ವ್ಯರ್ಥವಾಗಿ ಹಣೆಯಲ್ಲಿ ಮೂರು ಮಡಿಕೆ ತಂದುಕೊಳ್ಳುವುದು. ಅಪಾರ್ಥ . . .—ಅರ್ಥವಿಲ್ಲದೆ ಕಣ್ಣು ಕೆಂಪಗೆ ಮಾಡಿಕೊಳ್ಳುವುದು. ನಿರರ್ಥಕ . . .—ಸುಮ್ಮಸುಮ್ಮನೆ ಅವುಡು ಕಚ್ಚುವುದು. ನಿಷ್ಪ್ರಯೋಜ . . .—ಸುಮ್ಮಸುಮ್ಮನೆ ಬೆವರುವುದು. ನಿಷ್ಪಂದ . . .—ಮೂಗು ಅರಳಿಸುವುದು. ನಿಷ್ಕಾರಣ ಕಾಯ . . .—ಸುಮ್ಮಸುಮ್ಮನೆ ಮೈ ನಡುಗುವುದು. ನಿರಾಲಂಬನ . . .—ಸುಮ್ಮಸುಮ್ಮನೆ ಬಡಾಯಿ ಕೊಚ್ಚುವುದು. ಬಗೆಯಂಮಾಡು—ಮನಸ್ಸಿಡು. ಆರ್ತು—ಸಿದ್ಧನಾಗಿ. ಆಜಿ—ಯುದ್ಧ. ಒಡ್ಡು—ಎದುರಾಗು. ಸಂಗರ ನಿಕಷ—ಯುದ್ಧದ ಒರೆಗಲ್ಲು.

೩೫. ಉದ್ವೃತ್ತ—ವಿನಯವಿಲ್ಲದೆ ಉದ್ಧತನಾದವನು. ಕಡೆಗಣಿಸು—ಅಲಕ್ಷ್ಯದಿಂದ ಕಾಣು. ಪೆಂಪು—ದೊಡ್ಡತನ. ವನಧಿ . . .—ಸುತ್ತಿನ ಸಮುದ್ರಗಳ ನಡುವಿನ ದ್ವೀಪಗಳೊಳಗಿರುವ ಭೂಮಿ. ಎಸಗುವ—ಉಂಟಾಗುವ. ಆಕ್ಷೇಪ—ನಿಂದೆ. ಮಾಣ—ಬಿಡು, ತಡೆ. ಕ್ರೋಧನನ್—ಕೋಪಗೊಂಡವನು. ಆಗಲ್—ಆಗಬೇಡ. ಉಬ್ಬರಿಸಿದ—ಅತ್ಯಧಿಕವಾದ. ಮಾಣ್ಬುದು—ತಡೆದಿರುವುದು. ಸೂಳ್—ಸರಿ, ಕ್ರಮ, ಯುಕ್ತ. ಸಾಪತ್ನ—ಸಪತ್ನಿಯ ಮಗ. (ಪುರುದೇವನ ಮೊದಲನೆಯ ಹೆಂಡತಿಯ ಮಗ ಭರತ, ಎರಡನೆಯ ಹೆಂಡತಿಯ ಮಗ ಬಾಹುಬಲಿ.) ನೇಪಥ್ಯ—ತೆರೆಯ ಹಿಂದೆ.

೩೬. ಚರಮದೇಹಧಾರಿ—ಕಡೆಯ ದೇಹವನ್ನು ಪಡೆದವರು, ಈ ಜನ್ಮದಲ್ಲಿಯೆ ಮುಕ್ತಿ ಪಡೆಯುವವರು. ಸೋಲ ಗೆಲ್ಲ—ಸೋಲು, ಗೆಲುವು. ಸಮಕಟ್ಟು—ಏರ್ಪಡಿಸು. ಕ್ಷಯಕರಣ—ನಾಶ ಮಾಡುವಂಥದು. ಅಯಶ—ಕೆಟ್ಟ ಹೆಸರು. ಕಡೆಗಣಿಪುದು—ಗಮನಿಸದಿರಬೇಕು, ಮರೆತುಬಿಡಬೇಕು. ಘಟಿಲನೆ—ಇದ್ದಕ್ಕಿದ್ದಂತೆ. ತೊತ್ತಳದುಳಿ—ತಲೆಯೆತ್ತದಂತೆ ತುಳಿ. ಪಚ—ನಿಂದೆ. ಪೊರ್ದದೆ ಮಾಣೆ—ಹೊಂದದಿರುವಂತೆ. ಎಸಗಿಂ—ತೊಡಗಿರಿ.

೩೭. ಸಮರಸಂಘಟ್ಟದೋಹಳ—ಯುದ್ಧದಲ್ಲಿ ತಾಗಬೇಕೆಂಬ ಬಯಕೆ. ಆಂಪ ಅನ್ನರ್—ಎದುರಿಸುವಂಥವರು. ಉಡುಕು—ಆಧಿಕ್ಯ. ಇನಿಸಾನುಂ—ಇಷ್ಟಾದರೂ. ಇಂ—ಇನ್ನು. ಅಕ್ಕೆಮ—ಆಗಲಿ. ಬೞಿಯುಂ—ಬಳಿಕ. ನಿಜಭುಜ . . . —ತನ್ನ ಬಾಹುದಂಡದಲ್ಲಿರುವ ಪ್ರಚಂಡವಾದ ಬಿಲ್ಲಿನ ಹಗ್ಗವನ್ನು ಮಿಡಿದು ಟಂಕಾರ ಮಾಡುವನು. ಅಸದಾಗ್ರಹ—ಧರ್ಮಕ್ಕೆ ವಿರುದ್ಧವಾದ ಕೋಪ. ಅವಧಾರಿಸು—ಚಿತ್ತವಿಸು, ಗಮನಿಸಿ ವಿಚಾರಮಾಡು.

೩೮. ಮನಂಬಸದೆ—ಮನಸ್ಸನ್ನು ಹಂಚದೆ, ಒಂದೆ ಮನಸ್ಸಿನಿಂದ. ಒರ್ಮೆಗೆ—ಈ ಒಂದು ಸಲ. ಮುಡುಗಣ್ತನ—ಮುದುಕರು ಕಂಡ ಆಸೆ. ವ್ಯತಿಕರಂ—ಏರ್ಪಾಡು. ಮಿಡುಕದೆ—ಅಲುಗದೆ. ಎವೆಯಿಕ್ಕದೆ—ರೆಪ್ಪೆ ಹೊಯ್ಯದೆ. ಪಕ್ಷ್ಮ—ರೆಪ್ಪೆ. ತಾರಕ—ಕಣ್ಣಿನ ಕಪ್ಪುಗುಡ್ಡೆ. ತವೆ—ನಿಶ್ಶೇಷವಾಗಿ. ಪೀರ್ವವೊಲೇ—ಹೀರುವಂತೆಯೇ. ನಡೆನೋಡೆ—ಒಂದೆ ಸಮನೆ ದೃಷ್ಟಿಸಲು. ಇಂಬಳಿಂ—ಇನ್ನು ಮೇಲೆ. ಯೂಥಪತಿ—ಆನೆಯ ಗುಂಪಿನ ನಾಯಕ ಆನೆ. ಅರವಿಂದ . . . —ತಾವರೆಯ ಪರಾಗದಿಂದ ಕೆಂಪುಬಣ್ಣವಾದ ತಿಳಿ ನೀರನ್ನು.

೩೯. ಪರ್ವಿದ—ಹರಡಿದ. ಖರ—ತೀಕ್ಷ್ಣವಾದ. ಅನಳ—ಬೆಂಕಿ. ಎಯ್ದೆ—ಸಂಪೂರ್ಣವಾಗಿ. ಮರಕತವರ್ಣಂ—ಪಚ್ಚೆಯ ಬಣ್ಣದ ಬಾಹುಬಲಿ. ಕರಿಕರ ಪರಿಘ—ಆನೆಯ ಸೊಂಡಿಲಿನಂತೆಯೂ ನಗರದ ಬಾಗಿಲಿನ ಅಡ್ಡಮರದಂತೆಯೂ ದೀರ್ಘವಾದ (ತನ್ನ ತೋಳಿನಿಂದ.) ಪಂಚಶತ—ಐದು ನೂರು. ಶರಾಸನ—ಬಿಲ್ಲು. ಉತ್ಸೇಧನ್—ಎತ್ತರವಾದವನು. ಪಂಚವಿಂಶತಿ ಉತ್ತರ ಪಂಚಶತ—ಐದು ನೂರರ ಮೇಲೆ ಇಪ್ಪತ್ತೈದು. ಉರ—ಎದೆ. ಹಾರಾಂಶುರುಚಿ—ಹಾರದ ಕಿರಣಗಳ ಕಾಂತಿ. ಇರ್ಕುೞಿಗೊಳ್—ಮರೆಮಾಡಿಬಿಡು. ಕರಣ—ಕೆಲಸ. ಗಾಯ—ಏಟು. ಪರಿಣತೆ—ಕೌಶಲ. ಕನಕಾಚಲ—ಚಿನ್ನದ ಬೆಟ್ಟ. (ಭರತನ ಮೈಬಣ್ಣ ಹೊಂಬಣ್ಣ.)

೪೦. ಇಕ್ಕು—ಕೆಳಗೆ ಕುಕ್ಕು. ಈ ದೊರೆಯನ್—ಈ ಯೋಗ್ಯತೆಯುಳ್ಳವನು. ಅಳವು ಅೞಿಯೆ—ಸಾಮರ್ಥ್ಯ ಹಾಳಾಗುವಂತೆ. ಒಯ್ಯನೆ—ಮೆಲ್ಲಗೆ. ಕುಂದು ಅವಮಾನ. ಕರಂ—ತುಂಬಾ. ಚರಮತನು—ಈ ಜನ್ಮದಲ್ಲಿಯೆ ಮುಕ್ತಿ ಪಡೆಯುವವನು. ಅತಿಭಂಗ—ಮಿತಿಮೀರಿದ ಅವಮಾನ. ಹುಂಡಾವಸರ್ಪಿಣೀವಿಳಸನ—ಅತ್ಯಂತ ಕೆಟ್ಟಕಾಲದ ವಿಲಾಸ. ಮಾರ್ಕೊಳ್—ಎದುರಾಗು, ಪ್ರತಿಭಟಿಸು. ಬಲವಂದು—ಪ್ರದಕ್ಷಿಣ ಮಾಡಿ. ಅಣಂ—ಸ್ವಲ್ಪವಾದರೂ.

೪೧. ಮುಸುಳ್ದು—ಕಳೆಗುಂದಿ, ಮಾಸಿ. ಎಸಕಂಗೆಟ್ಟು—ಮಾಡಿದ ಕೆಲಸ ವ್ಯರ್ಥವಾಗಿ. ಮುಯ್ಪು—ಭುಜದ ಶಿಖರ. ಅನೀಕಿನೀ—ಸಮೂಹ. ಅಮರೀವೃಂದ—ದೇವಸ್ತ್ರೀಯರ ಗಡಣ. ಗೇಯ—ಗಾನ. ಮುದಿತ . . . ಉತ್ಕರಂ—ಸಂತೋಷಗೊಂಡ ದೇವತೆಗಳ ಆನಂದಬಾಷ್ಪದ ನೀರಿನ ಕಣಗಳ ಮೊತ್ತ. ಅರಲ್—ಹೂ.

ಅಲ್ಲಮದು—ಅಯುಕ್ತವಾದದ್ದು. ಅವನತಮಕುಟನ್—ಕಿರೀಟವನ್ನು (ಹಾಕಿದ ತಲೆಯನ್ನು) ತಗ್ಗಿಸಿದವನು. ಸಾಹಸರಸಿಕ—ಸಾಹಸಪ್ರಿಯ. ಅಳವು—ಯೋಗ್ಯತೆ, ಅಳತೆ. ಉತ್ಪಾದಿಸು—ಉಂಟುಮಾಡು. ಅಶೇಷ . . . —ಸಮಸ್ತವಾದ ತಿಳಿವಳಿಕೆಯೆಂಬ ನದಿಯನ್ನು ಒಣಗಿಸುವ ಗ್ರೀಷ್ಮಕಾಲದ ಸೂರ್ಯನ ಕಿರಣಮಾಲೆಯೂ. ಉಪಶಮಾಂಭೋರಾಶಿ . . . —ಉಪಶಾಂತಿಯ ಸಮುದ್ರಕ್ಕೆ ಪ್ರಳಯವನ್ನು ತರುವ ಬಡಬಾಗ್ನಿಯ ಜ್ವಾಲೆಯೂ. ವಿನಯಾಮೃತ . . . —ವಿನಯವೆಂಬ ಚಂದ್ರನನ್ನು ಮುಸುಕಿ ಮರೆಮಾಡುವ ಮೇಘಗಳ ಸಂತಾನವೂ.

೪೨. ಉಭಯ . . . . —ಇಹಪರಗಳ ವಿವೇಕವನ್ನು ತೋರುವ ಸೂರ್ಯನು ಮುಳುಗಿಹೋಗುವ ಸಮುದ್ರತೀರವೂ. ಧರ್ಮದ್ರುಮ . . . —ಧರ್ಮವೃಕ್ಷವನ್ನು ಕತ್ತರಿಸಿಹಾಕುವ ಕೊಡಲಿಯ ಅಲಗೂ. ವಿಷಯ . . . —ವಿಷಯಗಳೆಂಬ ವಿಷವೃಕ್ಷದ ಕದಳೀ ಫಲವೂ. ಇಂದ್ರಿಯ . . . —ಇಂದ್ರಿಯಗಳೆಂಬ ಬೇಟೆಗಾರರು ಸ್ವೇಚ್ಛೆಯಿಂದ ವಿಹಾರಮಾಡುವ ಗೊಂಡಾರಣ್ಯವೂ. ದುರ್ಯಶಃ . . . —ಕೆಟ್ಟ ಹೆಸರೆಂಬ ದೂಳನ್ನು ಹರಡುವ ದೊಡ್ಡ ಬಿರುಗಾಳಿಯೂ. ಸಿರೆ—ಸೇರು, ಹೊಂದು. ಬಗೆದುದು—ನಿಶ್ಚಯಿಸಿದ್ದು. ಅಳಿಪು—ಲಾಲಸೆ. ಪದೆಮಾತು—ಸಾಮಾನ್ಯವಾದ ಮಾತು. ಅಗಿ—ಹಿಂದೆಗೆ. ಅತೀಂದ್ರಿಯಂ—ಇಂದ್ರಿಯಗಳನ್ನು ಮೀರಿದ ಮುಕ್ತಿ. ಸಿಗ್ಗುಮುಱಿ—ನಾಚಿಕೆಯನ್ನು ಬಿಡು. ಕಟ್ಟುಪರ್ದು—ಸ್ಪರ್ಧಿಸುವುದು. ಪೆಂಪು—ಘನತೆ. ನೆಱೆಯದು—ಸಮರ್ಥವಾಗದು. ಬಿನ್ನನೆ—ಮೌನವಾಗಿ. ಎಂತೆನ್ನ—ಹೇಗೆಂದರೆ. ಆರ್ಕುಮೆ—ಸಮರ್ಥವಾಗುತ್ತದೆಯೆ? ಭಟಖಡ್ಗ . . . —ವೀರರ ಖಡ್ಗಗಳ ಸುತ್ತುಸಾಲೆಂಬ ಉತ್ಪಲವನದಲ್ಲಿ ವಿಶೇಷವಾಗಿ ಸುತ್ತಿಯಾಡುವ ಹೆಣ್ಣು ದುಂಬಿಯಂತೆ ಮನೋಹರಿಯಾದ. ಲತಾಂಗಿ—ಹೆಣ್ಣು. ಅಡಿಸು—ಅಡಿಸಿ ಮೇಲೆ ಬೀಳು. ನೆಗಟ್ಟೆ—ಕೀರ್ತಿ. ಅವಧರಿಸದೆ—ಅವಿಚಾರಿಯಾಗಿ. ಅಸದಾಗ್ರಹ—ಅಧರ್ಮವಾದ ಕ್ರೋಧ. ದುರ್ನಯನ್—ದುರ್ನಡತೆ.

೪೩. ಸಯಂ ಇದಕ್ಕೆ ಮುಂದೆ. ಪೊದಿದು—ತುಂಬಿ. ತೂಳ್ದು—ಚೆದರಿ ಹೋಗಿ. ಉಪಶಮ—ಉಪಶಾಂತಿ. ಕೈಗಣ್ಮು—ಮಿತಿಮೀರು. ಎಯ್ದೆ—ಒಬ್ಬರು ಉಳಿಯದಂತೆ ಎಲ್ಲರೂ. ಅಣ್ಮ—ಎನಗೆ ಪ್ರಿಯನಾದವನೆ. ಮನುಗಳು ಹದಿನಾಲ್ಕು ಮಂದಿ, ಅವರಲ್ಲಿ ನಾಭಿರಾಜನು ಹದಿನಾಲ್ಕನೆಯವನು. ಸಾರ್ವುದುಂ—ಹೋಗಿ ಸೇರಲಾಗಿ. ಪ್ರಾಜ್ಯ—ಊರ್ಜಿತವಾದ. ಮಸ್ತಕ—ಶಿರಸ್ಸು. ಓರಂತೆ—ಎಡೆಬಿಡದೆ. ನಿಧೀಶ—ಚಕ್ರವರ್ತಿ. ವಂಶಜ—ವಂಶದಲ್ಲಿ ಹುಟ್ಟಿದವನು. ಆಶಂಕೆ—ಸಂದೇಹ. ಎಲ್ಲರ್ ಅಲ್ಲಿಯರ್—ಎಲ್ಲಾಜನದಲ್ಲಿ. ಇಚ್ಚೆಗೆಸಂದೊಡೆ—ಇಷ್ಟವಾದರೆ. ಅಪ್ರತಿಮಲ್ಲ—ಎದುರಿಲ್ಲದ ವೀರ. ಅಣಂ ಮುಯ್ಯಾಂಪದೆ—ಸ್ವಲ್ಪವೂ ಹಿಮ್ಮೆಟ್ಟದೆ. ಪರ್ವತ . . . ತಕ್ಷಿಸಿ—ಪರ್ವತಗಳ ಪಾಪವೆಂಬ ಬೀರನನ್ನು

ಕೂಡ ಮುರಿದಿಕ್ಕುವ ನಿಶ್ಚಯದಿಂದ. ಇಂದ್ರಾರ್ಚಿತ—ತೀರ್ಥಂಕರನಾದ ವೃಷಭ ಸ್ವಾಮಿ.

೪೪. ಸಮವಸರಣ—ತೀರ್ಥಂಕರನು ಧರ್ಮೋಪದೇಶ ನಡಸುವುದಕ್ಕಾಗಿ ಕುಬೇರನು ಮಾಡಿಕೊಟ್ಟ ವರ್ತುಳಾಕಾರದ ಮಂಟಪ. ಅರವಿಂದಿನಿ—ಸರೋವರ. ಉಪಕಂಠ—ಹತ್ತಿರ. ಸರ್ವಾಂಗ ಉಪನತನಾಗಿ—ಸಾಷ್ಟಾಂಗವಾಗಿ ಎರಗಿ. ನಿಟಿಲ . . . ಕುಟ್ಮಲನಾಗಿ—ಕರಕಮಲಗಳನ್ನು ಮುಗಿದು ಹಣೆಯ ಹತ್ತಿರ ಇರಿಸಿ. ಜಿತವೃಜಿನ—ಪಾಪವನ್ನು ಗೆದ್ದವನೆ. ದಯಾ . . . ಹಂಸ—ದಯೆಯೆಂಬ ನದಿಯ (ದಡದ) ಮರಳಿನಲ್ಲಿ (ವಿಹರಿಸುವ) ರಾಜಹಂಸ. ಭವಾಂಭೋಧಿ—ಸಂಸಾರಸಾಗರ. ತಡಿ—ದಡ. ನಯ ನಿಕ್ಷೇಪ ಪ್ರಮಾಣ ಪಾತ್ರದಿಂ—ಸಪ್ತಭಂಗೀನಯವೆಂಬ ಸ್ಯಾದ್ವಾದ, ಸಮ್ಯಕ್ ದರ್ಶನ ಜ್ಞಾನ ಚಾರಿತ್ರಗಳೆಂಬ ರತ್ನತ್ರಯ, ಜಿನನ ಮುಖದಿಂದ ಬರುವ ಆಪ್ತಾಗಮವೆಂಬ ಪ್ರಮಾಣ—ಎಂಬ ದೋಣಿಯಿಂದ. ಅರುಹಾ—ಜಿನನೇ. ಚೋದ್ಯಂ ಇನ್ನವು ಇಲ್ಲ—ಇಂತಹ ಆಶ್ಚರ್ಯ ಇಲ್ಲ. ಎರಡು ಅರಳಿದುದು—ವದನ, ಹೃದಯ; ಒಂದು ಮುಗಿದುದು—ಕರ; ಮೂರೂ ಆದದ್ದು ಒಂದೇ ಜಿನನ ನುಡಿ ಚಂದ್ರರಶ್ಮಿಯಿಂದ.

೪೫. ದೇವರ ದಯೆಗೆಯ್ದುದು—ದೇವರು ದಯಪಾಲಿಸಿದ್ದು. ಅಭ್ಯುದಯ ಕರ—ಶ್ರೇಯಸ್ಸನ್ನು ಉಂಟುಮಾಡುವ. ಪ್ರವ್ರಜ್ಯ—ಸಂನ್ಯಾಸ. ಆನತ—ನಮಿಸಿದವನು. ಅಧ್ರುವ—ನಶ್ವರ. ಬೇಳ್ಪಂತು—ಬೇಡುವಂಥ. ಬೆಳ್—ಬೆಪ್ಪ. ಅಲ್ಲೆಂ—ನಾನು ಅಲ್ಲ. ದೀಕ್ಷಾವಿಧಿ—ಸಂನ್ಯಾಸ. ಸಮಾಧಿಮರಣ—ನಿರ್ಮಲವಾದ ಮನಸ್ಸಿನಿಂದ ದೇಹತ್ಯಾಗ ಮಾಡುವುದು. ಬೋಧಿಲಾಭ—ಕೇವಲಜ್ಞಾನಪ್ರಾಪ್ತಿ. ಅಮೋಘಂ—ತಪ್ಪದೆ. ಅಂತಿಕ—ಸಮೀಪ. ಪರಮೇಶ್ವರದೀಕ್ಷೆ—ಅರ್ಹತ್ವ ಪಡೆಯುವ ದೀಕ್ಷೆ. ಮನಂಬಿಡೆ — ಮನಃಪೂರ್ವಕವಾಗಿ. ಪರಿಚ್ಛೇದಿಗಳ್ — ವಿಚಾರಪೂರ್ವಕವಾಗಿ ನಿರ್ಧರಿಸಿ ನಡೆಯುವವರು.

೪೬. ಅನುಮತ—ಒಪ್ಪಿಗೆ. ದ್ವಾದಶಾಂಗ ಚತುರ್ದಶಪೂರ್ವ—ಹನ್ನೆರಡು ಅಂಗಗಳು, ಹದಿನಾಲ್ಕು ಪೂರ್ವಗಳು ಎಂಬ ಜೈನ ಆಗಮ ಗ್ರಂಥಗಳು. ಬಱಿಯಂ—ಅನಂತರ. ಏಕವಿಹಾರಿಯಾಗಿ—ಒಬ್ಬನೇ ತಿರುಗುವವನಾಗಿ. ಪ್ರತಿಮಾಯೋಗ—ವಿಗ್ರಹದಂತೆ ನಿಶ್ಚಲನಾಗಿ ನಿಲ್ಲುವುದು. ಅಡಿವಿಡಿದಿಟ್ಟ—ಕಾಲಿನಿಂದ ತೊಡಗಿ ಬೆಳೆದ. ಅಗುರ್ವಿಸೆ—ಭಯವಾಗುವಂತೆ. ಸುಯ್—ಉಸಿರು. ಅವಾಪ್ತಿ—ಪ್ರಾಪ್ತಿ.

೪೭. ವಿಷೋರಗಪ್ರತತಿ—ವಿಷಸರ್ಪಗಳ ಸಾಲು. ಭುಜಂಗ . . . ನಿಕರಂ—ಹಾವುಗಳ ಉಸಿರಿನ ಹೊಗೆ ಜಿಪೆಜಿಪೆಯಾಗಿದೆ. ಉರಗಾನಳಾರ್ಚಿ—ಹಾವಿನ ಬೆಂಕಿಯ ಜ್ವಾಲೆ. ಮಿಳಿರ್—ವ್ಯಾಪಿಸು. ಸುರದ್ರುಮಂಗೆತ್ತು—ಕಲ್ಪವೃಕ್ಷವೆಂದು ಭ್ರಮಿಸಿ. ಇರದೆ ಅಡರ್ವ—ತಾನೇತಾನಾಗಿ ಹಬ್ಬಿಕೊಳ್ಳುವ. ಲತಾಪ್ರತಾನ—ಬಳ್ಳಿಗಳ ಹರವು.

ಬೆಸಸಿರ್ಕುಂ—ನಿರೂಪಿಸಿದ್ದಾನೆ. ಮಾನಕಷಾಯ—ಇತರರ ಹಂಗಿಗೆ ಒಳಗಾಗಿರುವೆನೆಂಬ ಕೊಳೆ. ಪತ್ತುವಿಟ್ಟುದಿಲ್ಲು—ಬಿಟ್ಟುಹೋಗಿಲ್ಲ.

೪೮. ಮಾನೋನ್ನತ—ಅತ್ಯಭಿಮಾನಿ. ಮಿಡಗೂಳ್ನೆಲಂ—ತಿಂದು ಉಂಡು ಬಿಟ್ಟ ಎಂಜಲು ಭೂಮಿ. ಎನತು ಎಂದು—ನನ್ನದೆಂದು. ನಿನ್ನನೆ—ನಿನ್ನ ಆತ್ಮವನ್ನೆ. ಬಗೆ—ಕುರಿತು ಧ್ಯಾನಿಸು. ಬಗೆವೊಡೆ—ವಿಚಾರಮಾಡಿದರೆ. ದೃಷ್ಟಿ ಬೋಧ ವೀರ್ಯ—ಸಮ್ಯಕ್ ದರ್ಶನ ಜ್ಞಾನ ಚಾರಿತ್ರಗಳು ಇವೇ ಮಹಿತ ಆತ್ಮ ಧರ್ಮಂ—ಬೆಳೆದ ಆತ್ಮದ ಧರ್ಮ. ಅಭವ್ರೋಕ್ತಿಯೊಳೆ—ಜಿನನ ಮಾತಿನ ಮೇರೆಗೆ. ತೂಳ್ದಿಪ್ಪೈ—ಚೆದರಿಸಿಬಿಡು. ಅಕಂಪಿತನಾಗಿ—ಸ್ಥಿರವಾಗಿ. ಇಡೆ—ನೆಲಸಲು. ಮೋಹನೀಯ ಮುಖ್ಯಂ—ಮೋಹನೀಯ ಮುಂತಾದ ನಾಲ್ಕು ಘಾತಿಕರ್ಮಗಳು. ಘನಘಾತಿಬಲಂ—ಆತ್ಮಕ್ಕೆ ಹಾನಿಯನ್ನುಂಟುಮಾಡುವ ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ, ಅಂತರಾಯ ಎಂಬ ಸಮರ್ಥವಾದ ಕರ್ಮಗಳು. ಬಲ ದೃಕ್ ಪ್ರಬೋಧ—ಆಚಾರ, ದರ್ಶನ, ಜ್ಞಾನ. ಅಘಾತಿಘಾತ—ಈ ಜೀವಕ್ಕೆ ಈ ದೇಹ ಎಂಬುವನ್ನು ನಿರ್ಧರಿಸುವ ವೇದನೀಯ, ಆಯುರ್ನಾಮ ಗೋತ್ರಗಳೆಂಬ ನಾಲ್ಕು ಅಘಾತಿಕರ್ಮಗಳನ್ನು ನಾಶಮಾಡುವಿಕೆ. ನಿರಪಾಯ—ಅಕ್ಷಯ. ಇಸಿಸಾನುಂ—ಬಂದಿಷ್ಟು. ಅನಂತ . . . . ಬೋಧಂ—ಸಮಸ್ತ ವಸ್ತುಗಳನ್ನೂ ತಿಳಿಯಪಡಿಸುವ ಕೇವಲಜ್ಞಾನ. ದೊರೆಕೊಳ್—ಉಂಟಾಗು. ಆತಪತ್ರ—ಛತ್ರಿ. ಯುಗ್ಮ—ಜೋಡಿ. ವಿಷ್ಟರ—ಪೀಠ. ಸರಿ—ಮಳೆ.

೪೯. ಬಾಹುಬಲಿಯ ರೂಪ ಅನುಪಮವಾದದ್ದೆ? ಅವನು ಆ ಕಾಲದ ಕಾಮದೇವ! ಅವನು (ಉದಗ್ರ) ವೀರನೆ? ಚಕ್ರವರ್ತಿಯನ್ನೆ ಜಯಿಸಿದವನು! ಮತ್ತೆ ಉದಾರಿಯೆ? ಸಮಸ್ತ ಭೂತಳವನ್ನೂ ನಿಶ್ಶೇಷವಾಗಿ ಗೆದ್ದರೂ ಅದನ್ನು ಅಣ್ಣನಿಗೇ ದಾನಮಾಡಿದವನು! ಅತಿಯಾದ ಅಭಿಮಾನವುಳ್ಳವನೊ? ತಪಸ್ಸಿನಲ್ಲಿ ನಿಂತರು ಕೂಡ 'ನನ್ನ ಎರಡು ಹಜ್ಜೆ ನಾನು ಕೊಟ್ಟ ಭೂಮಿಯಲ್ಲಿ ಇನ್ನೂ ಇವೆ' ಎಂಬವನು! ಅನೂನ ಬೋಧ ಎಂದರೆ ಕೇವಲಜ್ಞಾನವುಳ್ಳವನೆ? ಕರ್ಮದ ಬಂಧಗಳನ್ನು ನಾಶಮಾಡಿರುವುದರಿಂದ ಕೇವಲಜ್ಞಾನಿಯೆ! ಉದಾತ್ತ—ಆರ್ಯವಾದ ಗುಣಗಳಿಂದ ಕೂಡಿದವನು. ಅಭಿಮಾನಸ್ಥಿರಭಾವ—ಪರರ ಹಂಗಿಗೆ ಒಳಗಾಗದೆ ಬಾಳಬೇಕೆಂಬ ದೃಢವಾದ ಮನಸ್ಸು. ಮಾಳ್ಕೆ—ಮಾಡಲಿ. ಅತ್ಯುದ್ಧ—ಅತ್ಯಧಿಕ. ಅವಷ್ಟಂಭ—ಅವಲಂಬನ. ಭುಜಾದರ್ಪವಿಳೋಪಿ—ಭುಜಬಲದ ಹೆಮ್ಮೆಯನ್ನು ಹೋಗಲಾಡಿಸಿದವನು. ತೃಷ್ಣಾಚ್ಛೇದ—ಆಸೆಯ ನಾಶ. ಮುಕ್ತರಾಜ್ಯಭರ—ರಾಜ್ಯದ ಹೊರೆಯನ್ನು ತೊರೆದವನು. ಆಪ್ತ ನಿರ್ವೃತಿಪದಂ—ಮುಕ್ತಿಪದವಿಯನ್ನು ಪಡೆದವನು. ಭರತವಾಕ್ಯ—ನಾಟಕದ ಕೊನೆಯಲ್ಲಿ ಬರುವ ಮಂಗಳದ ಪದ್ಯಗಳು.

* * * * *

ದೇವತೆಗಳು. ಕರ್ಪುರ್ವಿಲ್ಲ—ಮನ್ಮಥ. ಪ್ರತಿಕೃತಿ—ವಿಗ್ರಹ. ಉತ್ಪಾದನಪ ಉರ್ವಿ—ಹುಟ್ಟಿದ ಸ್ಥಳ. (ಪೌದನಪುರವೆಂಬುದು ಬಾಹುಬಲಿಯ ಜನ್ಮಸ್ಥಳ.) ಕೇವಳಿ—ಕೇವಲ ಜ್ಞಾನ ಪಡೆದವನು. ಪುರಾಂತಿಕ—ಪುರದ ಸಮೀಪದಲ್ಲಿ. ಮರಕತ—ಪಚ್ಚೆಯ ಕಲ್ಲು. ನಿರವಿಸಿ—ನಿರೂಪಿಸಿ. ಅಭಿಷವಣ—ಅಭಿಷೇಕ. ಅಲರ್ಮಳೆ—ಹೂವಿನ ಮಳೆ. ಬೆಳ್ಸರಿ—ಪ್ರಕಾಶದ ಮಳೆ. ವರ್ಷ—ಮಳೆ. ವಿದ್ರುಮ—ಹವಳ. ಜಡಿ—ಧಾರಾಕಾರವಾದ ಮಳೆ. ವ್ಯೋಮ—ಆಕಾಶ.

೬೨. ದಿವ್ಯಾಮೋದದಲರು—ದಿವ್ಯವಾದ ಸುಗಂಧದ ಗಾಳಿ. ತೀಡು—ಬೀಸು. ಸಲೆ—ಸಲ್ಲಲು. ತತ್‌ಜಿನ ಅಂತಿಕ—ಆ ಬಾಹುಬಲಿ ಜಿನನನ್ನು ಒಳಗೊಂಡ. ಕುಕ್ಕುಟ ಸರ್ಪ—ಮೈಯೆಲ್ಲ ಕೋಳಿಯಂತೆಯೂ ತಲೆ ಮಾತ್ರ ಹಾವಿನಂತೆಯೂ ಇರುವ ಒಂದು ವಿಷಜಂತು. ತತ್ ಅಘಾರಿ—ಆ ಪಾಪಹರನಾದ ಜಿನ. ಪ್ರಾಕೃತರ್—ಸಾಮಾನ್ಯರು. ಅಹಿಮಂತ್ರ ತಂತ್ರ ನಿಯತರ್—ಹಾವಿನ ಮಂತ್ರ ತಂತ್ರಗಳನ್ನು ಬಲ್ಲವರು. ಆ ಜಿನನ . . . ಕೃತಿಯಂ—ಆ ಕುಕ್ಕುಟೇಶ್ವರನ ಕಾಲಿನ ಶ್ರೇಷ್ಠವಾದ ಉಗುರುಗಳೆಂಬ ಪ್ರಕಾಶಮಾನವಾದ ಆಟದ ಕನ್ನಡಿಯನ್ನು ನಿರೀಕ್ಷಿಸಿದವರು ತಮ್ಮ ಹಿಂದಿನ ಜನ್ಮಗಳ ಸ್ವರೂಪವನ್ನೆಲ್ಲ ಕಾಣುವರು. ಇಳಾವಿಶ್ರುತಂ—ಲೋಕಪ್ರಸಿದ್ಧ.

೬೩. ವಿಶ್ರುತ ಅತಿಶಯ—ಪ್ರಸಿದ್ಧವಾದ ಮಹಿಮೆ. ನೋಳ್ಪ ಅರ್ತಿ—ನೋಡಬೇಕೆಂಬ ಅನುರಾಗ. ಉದ್ಯಮಿಸೆ—ಪ್ರಯತ್ನಿಸಲು. ದುರ್ಗಮಂ—ಹೋಗಲು ಕಷ್ಟ. ತತ್‌ಪುರಾವನಿ—ಆ ಪೌದನಪುರವಿರುವ ಪ್ರದೇಶ. ಆರ್ಯಜನಂ—ಹಿರಿಯರು ಗುರುಗಳು. ಪ್ರಬೋಧಿಸು—ಚೆನ್ನಾಗಿ ಹೇಳು. ಗೊಮ್ಮಟಂ—ಚಾವುಂಡ ರಾಯನಿಗೆ ಇದು ಮಚ್ಚಿನ ಹೆಸರು. ಅರ್ತಿವೆತ್ತು—ಆಸೆಹೊಂದಿ. ನಿಟ್ಟಿಸುವನ್ನ—ನೋಡುವ ವರೆಗೆ. ಮಧುರಾಹಾರ—ಹಾಲು ಮುಂತಾದ ಸಿಹಿವಸ್ತು. ತುತ್ತೆತ್ತೆನು—ಊಟಮಾಡುವುದಿಲ್ಲ. ಅಂಚೆ—ಹಂಸ. ತಿಂಗಳ್—ಚಂದ್ರ. ಪರಪುಟ್ಟ—ಕೋಗಿಲೆ. ಆವಗಂ—ಸದಾ. ಆಮ್ರವನ—ಮಾವಿನ ತೋಪು. ಅಭೀಷ್ಟ—ಮಹತ್ತಾದ ಆಸೆ. ತಳರ್—ಚಲಿಸು, ಹೊರಡು.

೬೪. ಬೀಡು—ಪಾಳಯ. ನಿಟ್ಟಿಸು—ನಿರೀಕ್ಷಿಸು. ಒಟ್ಟಜೆ—ಸಮೃದ್ಧಿ. ಈರೇಳು—ಹದಿನಾಲ್ಕು. ಒತ್ತಲಿ—ಹತ್ತಿರ. ಸುರಶೈಲ—ಮೇರು. ಅಷ್ಟಾಪದ—ಮೊದಲನೆಯ ತೀರ್ಥಂಕರನ ಮುಕ್ತಿಕ್ಷೇತ್ರ. ನಿರವಿಸು—ನಿರೂಪಿಸು. ಉಭಯ ಪರ್ವತ—ಎರಡು ಬೆಟ್ಟ. ಭವ್ಯಾವಳಿ—ಜೈನರ ಸಮೂಹ. ಚಂದ್ರಗಿರಿ—ಶ್ರವಣ ಬೆಳುಗೊಳದ ಚಿಕ್ಕ ಬೆಟ್ಟ. ದೊಣೆ—ನೀರು ನಿಂತಿರುವ ಬಂಡೆಯ ಹಳ್ಳ.

೬೫. ಉಪಸರ್ಗೇ . . . —ಉಪಸರ್ಗವಾದಾಗ, ದುರ್ಭಿಕ್ಷದಲ್ಲಿ, ಮುಪ್ಪಿನಲ್ಲಿ, ಪ್ರತೀಕಾರವೆ ಇಲ್ಲದ ಕಾಯಿಲೆಯಾದಾಗ, ಧರ್ಮದಿಂದ ದೇಹವನ್ನು ಬಿಡುವುದಕ್ಕೆ ಸಲ್ಲೇಖನವೆಂದು ಆರ್ಯರು ಹೇಳುತ್ತಾರೆ. ಉಪಸರ್ಗ—ದೇವತೆಗಳಿಂದಲೂ ಮನುಷ್ಯ

ರಿಂದಲೂ ಮೃಗಗಳಿಂದಲೂ ಅಚೇತನಗಳಿಂದಲೂ ಸಂಭವಿಸುವ ಕಷ್ಟಕೋಟಲೆಗಳು. ಸಮ್ಯಕ್ತ್ವಮುಮಲಂ . . . —ನಿರ್ಮಲವಾದ ಸಮ್ಯಕ್ತ್ವ, ನಿರ್ಮಲವಾದ ಅಣುವ್ರತ ಗುಣವ್ರತ ಶಿಕ್ಷಾವ್ರತಗಳು, ಮರಣ ಕಾಲದಲ್ಲಿ ಸಲ್ಲೇಖನೆಯ ವಿಧಿ—ಇವುಗಳಿಂದ ಸಾಗಾರ (ಗೃಹಸ್ಥ)ಧರ್ಮ ಪೂರ್ಣವಾಗುತ್ತದೆ. (ಸಮ್ಯಕ್ತ್ವ—ಜೈನ ಧರ್ಮದಲ್ಲಿ ಸಂಪೂರ್ಣವಾದ ನಂಬಿಕೆ. ಅಣುವ್ರತಗಳು––ಐದು: ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ. ಗುಣವ್ರತಗಳು ಮೂರು: ಇಂಥ ದಿಕ್ಕಿನಲ್ಲಿ ಮಾತ್ರ ಹೋಗುವೆನೆಂಬ ದಿಗ್ವಿರತಿ, ಇಂಥ ಸ್ಥಳಕ್ಕೆ ಮಾತ್ರ ಹೋಗುವೆನೆಂಬ ದೇಶವಿರತಿ, ಪ್ರಯೋಜನವಿಲ್ಲದ್ದನ್ನೂ ಪಾಪಕಾರಣವಾದದ್ದನ್ನೂ ಮಾಡುವುದಿಲ್ಲವೆಂಬ ಅನರ್ಥದಂಡ ವಿರತಿ. ಶಿಕ್ಷಾವ್ರತಗಳು ನಾಲ್ಕು: ಮೂರುವೇಳೆಯೂ ಜಿನನನ್ನು ಕೊಂಡಾಡುವ ಸಾಮಾಯಿಕ, ಪರ್ವದಿನಗಳಲ್ಲಿ ಉಪವಾಸವೆಸಗುವ ಪ್ರೋಷಧೋಪವಾಸ, ಮುನಿಗಳಿಗೆ ಆಹಾರ ಔಷಧ ಉಪಕರಣ ವಸತಿಗಳನ್ನು ಒದಗಿಸುವ ವೈಯಾವೃತ್ಯ.) ಸಲ್ಲೇಖನ ವ್ರತ—ಗಟ್ಟಿಯಾದ ಆಹಾರವನ್ನು ತೊರೆದು ಕ್ರಮವಾಗಿ ಗಟ್ಟಿಯಾದ ದ್ರವವನ್ನು ಕುಡಿಯುವುದು; ಅನಂತರ ಗಟ್ಟಿಯಾದ ದ್ರವವನ್ನು ತೊರೆದು, ಕ್ರಮವಾಗಿ ಬಿಸಿ ನೀರನ್ನು ಕುಡಿಯುವುದು; ಕೊನೆಗೆ ಬಿಸಿನೀರನ್ನೂ ತೊರೆದು, ಚೈತನ್ಯವಿರುವವರೆಗೂ ಉಪವಾಸಮಾಡುವುದು; ಪಂಚನಮಸ್ಕಾರಪೂರ್ವಕವಾಗಿ ಸರ್ವಯತ್ನದಿಂದಲೂ ದೇಹವನ್ನು ತ್ಯಜಿಸುವುದು— ಇದು ಸಲ್ಲೇಖನೆ ಎನಿಸಿಕೊಳ್ಳುವುದು. ಅಪವರ್ಗ— ಮುಕ್ತಿ. ಅಕ್ಕೆಂದ—ಪಡೆದ. ಕಟವಪ್ರ, ಕಳ್ಬಪ್ಪು, ಕಾಳ್ಬಪ್ಪು—ಶ್ರವಣಬೆಳ್ಗೊಳದ ಚಿಕ್ಕಬೆಟ್ಟಕ್ಕೆ ಹಿಂದಿನ ಹೆಸರುಗಳು. ತೀರ್ಥಗಿರಿ, ಋಷಿಗಿರಿ—ಕಟವಪ್ರದ ಬೇರೆಬೇರೆ ಭಾಗ. ಕುಂಬಿಡು—ಅಡ್ಡಬೀಳು. ಗೊರವಡಿ— ಪೂಜ್ಯರಾದ ಮುನಿ. ಭಟಾರ— ಜೈನಮುನಿ. ನೋನ್ತು—ವ್ರತಮಾಡಿ, ಸಲ್ಲೇಖನೆಯಿಂದ. ಮುಡಿಪ್ಪಿದಾರ್—ದೇಹತ್ಯಾಗ ಮಾಡಿದರು. ಆಯ್ಯಾರ್—ಆದರು. ಮಾಸೇನ— ಮಹಾಸೇನರೆಂಬ ಮುನಿ. . ವೆಟ್ಟುಮುಳ್ ಬೆಟ್ಟದಲ್ಲಿ. ಸಂಗಂಗಳ- ಮುನಿಸಂಘದವರು. ತಪ್ಪಾದೆ— ತಪ್ಪದೆ. ಇಪ್ಪಿನಿನ್— ಅನುಕೂಲಾಗ್ರವಾಗಿ. ವಿಚಿತ್ರಕನಕ . . . —ವಿಚಿತ್ರವಾದ ಚಿನ್ನದ ಕಾಂತಿಯಿಂದ ಕೂಡಿದ ಉಪ್ಪರಿಗೆಗಳನ್ನುಳ್ಳ ಸ್ವರ್ಗದ ಅಗ್ರವನ್ನು ಏರಿದರು. ಪೂಜೆವೆಂದುಯೆ— ಪೂಜೆಯನ್ನು ಪಡೆದು.

೬೬. ಕಾಲಂಕೆಯ್ದಾರ್— ಕಾಲವಾದರು. ಶ್ರೀ ಭದ್ರ . . . —ಶ್ರೀ ಭದ್ರಬಾಹು ಮತ್ತು ಚಂದ್ರಗುಪ್ತ ಮುನೀಂದ್ರ ಎಂಬ ಇಬ್ಬರಿಂದ ಭದ್ರವಾಗಿದ್ದ ಜೈನಧರ್ಮವು ಅವರಾದ ಮೇಲೆ ಒಂದು ಇಷ್ಟು ಸಡಿಲವಾಗಲು, ಹವಳದಂತೆ ತುಟಿಗಳಿರುವ ಶಾಂತಿಸೇನಮುನೀಶನು (ಆಕ್ಕಿವ) ಆಗಿ ಬಂದು, ಬೆಳ್ಗೊಳದ ಬೆಟ್ಟದ ಮೇಲೆ ಆಹಾರಾದಿಗಳನ್ನು ಬಿಟ್ಟು (ಅಪುನರ್ಭವ) ಮುಕ್ತಿಗೆ (ಎಜ಼ೆ) ಒಡೆಯನಾದನು. ಪಕ್ಕದುಳ್— ಪಕ್ಕದಲ್ಲಿ. ಕನ್ತಿ—ಜೈನಸಂನ್ಯಾಸಿನಿ. ತೊಜಿದು—ಸಂನ್ಯಾಸವನ್ನು ಕೈಕೊಂಡು. ಸುರ

ಚಾಪಂಬೋಲೆ—ಕಾಮನ ಬಿಲ್ಲಿನಂತೆ. ಪಿಲ್, ಬಿಲ್—ಅದರಂತೆ. ಪಿಂಗುಂ—ಚೆದರಿ ಹೋಗುತ್ತದೆ. ಅಗ್ರಂ—. ಪರಮಾರ್ಥಂ—ನಿಜ ಸತ್ಯ. ಪೆರ್ಚಿಸೆನ್—ನಾನು ಹೆಚ್ಚಿಸುವುದಿಲ್ಲ. ಈ ಧರೆಯೊಳ್ ಇರ್ಪಾನ್—ಈ ಭೂಮಿಯಲ್ಲಿ ಬದುಕಿರುವವನು. ಉರುಸತ್ತ್ವಂ—ಅತ್ಯಂತ ಸತ್ತ್ವಶಾಲಿ. ಸಂದಾನ್—ಹೋಗಿ ಸೇರಿದನು. ಬೆಳ್ಗೊಳಂ—ಬೆಳ್ಗೊಳ. ಬಸದಿ—ಜಿನರ ಪ್ರತಿಮೆಗಳಿರುವ ಗುಡಿ.

೬೭. ಯಕ್ಷಿಯರು — ತೀರ್ಥಂಕರರ ಊಳಿಗದ ಶಾಸನದೇವತೆಗಳು. ಕೂಷ್ಮಾಂಡಿ—೨೨ನೆಯ ಜಿನನಾದ ನೇಮಿನಾಥನ ಯಕ್ಷಿ. ಪದ್ಮಾವತಿ—೨೩ನೆಯ ಜಿನನಾದ ಪಾರ್ಶ್ವನಾಥನ ಯಕ್ಷಿ. ತೆರಳ್ವುದು ಅರಿದು—ಹೋಗುವುದು ಕಷ್ಟ. ಕಾರ್ಮುಕ—ಬಿಲ್ಲು. ನೆರೆಗುಂದು—ಅನುಕೂಲವಾಗಿ ಅಡ್ಡವಾಗಿರುವ ಬಂಡೆ. ಅನಶನ—ಉಪವಾಸ. ಲೀಲಾಶೃಂಗ—ಬಾಣ ಬಿಡಲು ನಿಂತ ಕೋಡುಗಲ್ಲು. ನಿಕ್ಕಿದು—ದಿಗ್ಭ್ರಾಂತನಾಗು. ಕೆಡೆ—ಬೀಳು.

೬೮. ಬಿಡುಸರಳ್—ಉದ್ದವಾದ ಬಾಣ. ಕ್ಷೋಣೀಶ—ದೊರೆ. (ಇಲ್ಲಿ ಉದ್ದಕ್ಕೂ ಚಾವುಂಡರಾಯನನ್ನು ದೊರೆಯೆಂದೇ ಕರೆದಿದ್ದಾನೆ.) ಮಾಣದೆ—ನಿಲ್ಲದೆ. ಇಂದ್ರಗಿರಿ—ಶ್ರವಣಬೆಳ್ಗೊಳದ ದೊಡ್ಡ ಬೆಟ್ಟ; ಇದರ ಮೇಲೆಯೇ ಗೊಮ್ಮಟ ವಿಗ್ರಹವಿರುವುದು. ಸಾನುರಾಗದಿ—ಪ್ರೀತಿಯಿಂದ. ಮಂಡಲಪತಿ—ದೊರೆ.

೬೯. ಅರ್ಹತ್ಪದ—ತೀರ್ಥಂಕರರ ಪದವಿ. ಬಿರುದಿನ ಅಕ್ಕರ—ಕಂಗೊಳಿಸುವ ಅಕ್ಷರ. ಕಣೆಯಾದ—ಕಲ್ಪಾಂತ, ಅನಶ್ವರ. ಮಸ್ತಕ—ಶಿರಸ್ಸು.

೭೦. ಗಾಢವಡೆದ—ಸೊಬಗನ್ನುಳ್ಳ. ಬಗೆಗೊಂಡು—ಮನಸ್ಸಿನಲ್ಲಿ ತುಂಬಿಕೊಂಡು. ಪೌದನಪುರದ ಒಡೆಯ—ಬಾಹುಬಲಿ. ಪ್ರತ್ಯಕ್ಷ—ಕಣ್ಣೆದುರು. ಪುಂಜ—ರಾಶಿ.

೭೧. ಪರಿದು ಪತ್ತು—ಓಡಿ ಹತ್ತು. ಮುತ್ತಬ್ಬೆ—ಮುದುಕಿಯಾದ ತಾಯಿ. ಬೆಳ್ಳೆ—ಅಯ್ಯೋ ಬೆಪ್ಪೆ! ಅತ್ತಿಯಬ್ಬೆ—ಅತ್ತಿಮಬ್ಬೆ. ಪಡೆವಳ—ಸೇನಾಪತಿ. ರುಚಿ—ಇಷ್ಟವುಳ್ಳವಳು.

೭೨. ವಿಕಲ್ಪಂ—ವ್ಯತ್ಯಾಸ. ಪೊಗರ್ಗೊಳ್—ಕೊಂಡಾಡು. ಬಾದೇಂ—ವಾದವೇಕೆ? ಅಳುರದು—ವ್ಯಾಪಿಸುವುದಿಲ್ಲ. ವಿಷಾಹಿ—ವಿಷಸರ್ಪ. ಮಹಾಸತಿ—ಅತ್ತಿಮಬ್ಬೆ. ಮಂಡಲಂ—ರಾಜ್ಯ. ಜಸ—ಯಶಸ್ಸು. ಕೊಪಣ—ಜೈನರಿಗೆ ಪುಣ್ಯಸ್ಥಳ. ಅಜಿರ—ಅಂಗಳ. (ಭವ್ಯರ ಮನೆಯಂಗಳದಲ್ಲಿ ಕಲ್ಪಲತೆಯಂತೆ ಬೆಳಗುವವಳು.)

೭೩. ಉಪಸರ್ಗ—ಶ್ರಮ, ಆಯಾಸ. ಕುಕ್ಕುಟ ಜಿನೇಶ್ವರ—ಬಾಹುಬಲಿ. ಉಪಸ್ವರ್ಗ—ಸ್ವರ್ಗಕ್ಕೆ ಸಮೀಪ. ಆಸನ್ನ—ಹತ್ತಿರ. ಪಥಶ್ರಮ—ದಾರಿ ನಡೆದ ಆಯಾಸ. ಆಱಲ್—ಇಂಗುವುದಕ್ಕಾಗಿ. ಎನ್ನದೊ—ಆ ಮಹಿಮೆ ಎಂಥದೊ!

೭೪. ಉತ್ತಮಾಂಗಾಸ್ಪದ—ತಲೆಯ ಮೇಲೆ. ಉದ್ಭಾನಿ—ಹಿರಿಮೆ. ಗುಣ

ಶ್ರೇಣಿ—ಒಂದನ್ನು ಒಂದು ಮೀರಿಸುವಂಥ ಗುಣಗಳ ಸಾಲು. ಒಡವೆ—ಐಶ್ವರ್ಯ. ಅನವರತ—ನಿರಂತರವಾದ. ತವಿಸಿ—ಕಡವೆಮಾಡಿ. ಜಿನಗೇಹ—ಬಸದಿ. ಪತ್ತಿಸು—ವಿನಿಯೋಗಿಸು. ಪಿರಿಯೈ—ಹಿರಿಯಳಾಗಿರುವೆ. ನೆಗೞ್ದರ್—ಕೆಲಸಮಾಡಿ ಪ್ರಸಿದ್ಧರಾದವರು. ಅಱಿವು — ಜ್ಞಾನ. ಮುತ್ತ — ಮುದಿಯಾದ. ಪೋಪಮೊ — ಹೋಗೋಣವೊ?

೭೫. ಶ್ರುತ—ಸಮ್ಯಕ್‌ಜ್ಞಾನ. ಸದ್ವೃತ್ತ—ಸಮ್ಯಕ್‌ಚಾರಿತ್ರ. ಮನುಪ್ರತಿಮಂ—ಮನುಗಳಿಗೆ ಸಮಾನನಾದವನು. (ಮಾನವಕುಲಕ್ಕೆ ಮೇಲುಪಂಕ್ತಿ ಹಾಕಿಕೊಟ್ಟ ಮನುಗಳಂತೆ ಚಾವುಂಡರಾಯನು ಗೊಮ್ಮಟವಿಗ್ರಹಗಳ ನಿರ್ಮಾಣಕ್ಕೆ ಮೊದಲ ಮೇಲುಪಂಕ್ತಿ ಹಾಕಿದನು.) ಗೊಮ್ಮಟ—ಚಾವುಂಡರಾಯನ ಅಡ್ಡಹೆಸರು. ಯತ್ನದಿಂ—ತನ್ನ ಸ್ವಂತ ಪ್ರಯತ್ನದಿಂದ. ಕೆಯ್ವಿತ್ತಾನ್—ಮಾಡಿಸಿದನು. ಕರೆನಿಯಲೇಂ—ಮಾಡಿಸಿದನು. ಮುಂಬರಿದು—ಮುಂದೆ ಓಡಿ. ಅಮಳ್ದುಂಬಿ—ಅವಳಿ ದುಂಬಿಗಳು. ಅಜ್ಕಱಿಂ—ಪ್ರೀತಿಯಿಂದ. ನಾಭೀ—ಹೊಕ್ಕುಳು. ಆವರ್ತ—ಸುಳಿ. ತತ್ತಳಿಸುತುಂ—ಸಿಕ್ಕಿ ಅಲೆದಾಡುತ್ತ. ವಕ್ತ್ರೇಂದು—ಮುಖವೆಂಬ ಚಂದ್ರ. ಸಾರ್ದು—ಹತ್ತಿರ ಹೋಗಿ. ಆವೊಜ್ತುಂ—ಯಾವಾಗಲೂ. ಚಟುಳ—ಚಂಚಲ, ನಿಂತಲ್ಲಿ ನಿಲ್ಲದ. ಚಕೋರಾಳಿ—ಚಕೋರಗಳ ಗುಂಪು. ಬಾಪ್ಪು—ಭಲೆ. ತವನಿಧಿ—ಅಕ್ಷಯವಾದ ನಿಧಿ.

೭೬. ಕರ್ದಮ—ಕೆಸರು. ಅಲರಿಪ—ಅರಳಿಸುವ. ನಿರವಿಸೆ—ನಿರೂಪಿಸಲು. ತುಂಗ ಆಕೃತಿ—ಎತ್ತರವಾದ ಆಕಾರ. ಅತಿಶಯ—ಮಹಿಮೆ ಊರ್ಜಿತ—ಹೆಚ್ಚುತ್ತಿರುವ. ಆತ್ಮೋಪಮಂ—ತನಗೆ ತಾನೆ ಉಪಮಾನವಾದದ್ದು (ಸಮುದ್ರಕ್ಕೆ ಸಮುದ್ರವೂ ಗಗನಕ್ಕೆ ಗಗನವೂ ಆದಂತೆ.) ಸಮ್ಮದ—ಸೋಜಿಗೊಳ್ಳುವುದು, ಮೈಮರೆಯುವುದು. ಆಗಲ್, ಆಗ—ಆಗತಕ್ಕದ್ದಲ್ಲ, ಆಗಕೂಡದು. ಇಹತ್ರೆಯ ಪರತ್ರೆಯ ಕೇಡು—ಇಹದಲ್ಲಿಯೂ ಪರದಲ್ಲಿಯೂ ಹಾಳಾಗುತ್ತಾನೆ. ಉಚ್ಚದೊಳ್—ಎತ್ತರದಲ್ಲಿ. ಸಲೆ—ಚೆನ್ನಾಗಿ, ಎಲ್ಲರಿಗೂ ಕಂಡು ಕೇಳಿಸುವಂತೆ. ಸಾಱು—ಘೋಷಿಸು. ಪುರುದೇವ—ಮೊದಲನೆಯ ತೀರ್ಥಂಕರ. ಅಜಿತದೇವ—ಎರಡನೆಯ ತೀರ್ಥಂಕರ. ಆದ್ಯ, ಉಪಾದ್ಯ—ಮೊದಲನೆಯ, ಎರಡನೆಯ. ಶ್ರೇಯಾಂಸ—ಮೊದಲನೆಯ ತೀರ್ಥಂಕರನಿಗೆ ಭಿಕ್ಷೆಯಿಕ್ಕಿದವನು. ಶ್ರಾವಕಿ—ಗೃಹಸ್ಥಾಶ್ರಮದಲ್ಲಿದ್ದು ಜೈನ ಧರ್ಮವನ್ನು ಪಾಲಿಸುವವಳು.

೭೭. ಪೊನ್ನಿಗ—ಕವಿಚಕ್ರವರ್ತಿ ಪೊನ್ನ. ರೇಖೆಗಂ ಬರಲ್—ಬರೆ ಹಚ್ಚಿದರೆ ಸಮಾನವಾಗುವಂತೆ. ಅಱ್ತಿಯೆ—ಪ್ರೀತಿಪೂರ್ವಕವಾಗಿ. ಪುರಾಣ ಚೂಡಾಮಣಿ—ಪೊನ್ನನ ಶಾಂತಿಪುರಾಣದ ಹೆಸರು. ಹಸಾದ—ಪ್ರಸಾದ, ಕರುಣೆ. ಭ್ರಾಂತೇನ—ಬೇರೆ ಚಿಂತೆಯೇಕೆ? ಅಱ್ತಿಯೆ—ಪ್ರಿಯವಾಗುವಂತೆ. ಆಗಮ—ಜೈನಾಗಮ.

ಪುರಾಣತಿಲಕ—ರನ್ನನ ಅಜಿತಪುರಾಣಕ್ಕೆ ಹೆಸರು. ಪೆಱವಳಿ—ಬೇರೆಕಡೆ. ಉಳ್ಳುವು—ಇರುವಂಥವು. ಒಳವು—ಇವೆ. ಆಗಮ ಭಾಷೆ—ಜೈನಸಿದ್ಧಾಂತದ ಪರಿಭಾಷೆ. ನೆಱೆಯೆ ಪರಿಸ್ಫುಟಂ—ಅತ್ಯಂತ ಸ್ಪಷ್ಟವಾಗಿ. ನೆಗೞ್ಚು—ಕೃತಿಮಾಡಿ ತೋರಿಸು. ಕವಿಚತುರ್ಮುಖ—ರನ್ನನ ಬಿರುದು. ಆಗಮವೇದಿ—ಜೈನ ಆಗಮಗಳನ್ನು ಬಲ್ಲವನು.

೭೮. ಎನಿತು ಒಳವು—ಎಷ್ಟು ಉಂಟೋ. ಸಂದೆಯ—ಸಂದೇಹ. ಅಸಂದಿಗ್ಧಂ—ಅಸ್ಪಷ್ಟತೆಯನ್ನು ಕಳೆದುಕೊಂಡದ್ದು. ಬಲ್ಲರ್ ಗೆಡೆಗೊಂಡು—ತಿಳಿದಂಥವರು ಜೊತೆಗೆ ಸೇರಿ. ಜಿತಮನೋಜಾತ—ಕಾಮನನ್ನು ಗೆದ್ದು ಮುಕ್ತಿ ಪಡೆದ. ರತ್ನಂಬರೆಗಂ—ರತ್ನನ ವರೆಗೆ, ರತ್ನನಷ್ಟು. ಅಡಕವಾಯ್ತು—ಸಾಲದೆಹೋಯಿತು. ಪದಪು—ದುಂಬಿ. ಬಂಡು—ಮಕರಂದ. ನಾಂದು—ನೆನೆದು. ಭಾರೈಸಿ—ಭಾರವಾಗಿ.

೭೯. ಕುತೀರ್ಥಧ್ವಾಂತ—ಕೆಟ್ಟಧರ್ಮವೆಂಬ ಕತ್ತಲೆ. ತೂಳ್ದಿ—ಚೆದರಿಸಿ. ಬೋಧಾವಾಪ್ತಿ—ಜ್ಞಾನದ ಪ್ರಾಪ್ತಿ. ಅರ್ಕ—ಸೂರ್ಯ. ಉದ್ಯೋತಿಸುಗೆ—ಬೆಳಗಲಿ. ಭರತವಾಕ್ಯ—ನಾಟಕದ ಕೊನೆಯ ಮಂಗಲದ ಪ್ರಾರ್ಥನೆ.

ಪರಿಶಿಷ್ಟ ೧ :

# ಈ ನಾಟಕಗಳನ್ನು ಆಡುವವರಿಗೆ ಸೂಚನೆ

'ಶ್ರೀ ಬಾಹುಬಲಿ ವಿಜಯ' ರಂಗಸ್ಥಲದಲ್ಲಿ ಸಂಪೂರ್ಣವಾಗಿ ಪ್ರತ್ಯಕ್ಷ ವ್ಯಕ್ತಿಗಳಿಂದಲೆ ನಿರ್ವಹಣವಾಗಬೇಕಾದ ರೂಪಕ. ಇದರೊಳಗಿನ ಪಾತ್ರಗಳ ವೇಷಭೂಷಣಗಳೆಲ್ಲ ಪುರಾಣಕಾಲದ ವೇಷಭೂಷಣಗಳೇ.

'ಶ್ರೀ ಗೋಮಟಶಿಲ್ಪ'ದಲ್ಲಿ ಕೆಲವು (ಪ್ರವೇಶ ೪, ೬, ೭) ಮಾತ್ರ ಪ್ರತ್ಯಕ್ಷವ್ಯಕ್ತಿಗಳಿಂದ ಅಭಿನೀತವಾಗಿ, ಉಳಿದವು (ಪ್ರವೇಶ ೧, ೩, ೫) ಆಯಾ ಸಂದರ್ಭಕ್ಕೆ ತಕ್ಕವಾದ ನೆರಳುಗಳ ಚಲನಗಳಿಂದ, ನೇಪಥ್ಯಗಾನ ದಿಂದ ನಿರ್ವಹಿಸಬೇಕಾದವು. ಎರಡನೆಯ ಪ್ರವೇಶದಲ್ಲಿ ಮಾತ್ರ ಪುಟ ೫೭ ರಿಂದ ಪುಟ ೫೮ರಲ್ಲಿ ಪೌರಾಣಿಕನ ಸಂಸ್ಕೃತಶ್ಲೋಕ ಮುಗಿಯುವ ವರೆಗೆ ಪ್ರತ್ಯಕ್ಷವ್ಯಕ್ತಿಗಳು ಇದ್ದು, 'ಪುರುದೇವ' ಎಂಬಲ್ಲಿಂದ ಮುಂದೆ ಪುಟ ೬೨ ಪೂರ್ತಿ ನೇಪಥ್ಯಗಾನಕ್ಕೆ ತಕ್ಕವಾದ ನೆರಳುಗಳ ಚಲನದಿಂದ ನಿರ್ವಾಹವಾಗ ಬೇಕು. ಪ್ರತ್ಯಕ್ಷವ್ಯಕ್ತಿಗಳ, ಅವರ ನೆರಳುಗಳ ಅಲಂಕಾರಗಳೆಲ್ಲ ಪುರಾಣ ಕಾಲದ ಅಲಂಕಾರಗಳೇ.

ಈ ನಾಟಕಗಳನ್ನು ಆಡುವುದಾದರೆ, ಇದೇ ಪುಸ್ತಕದಲ್ಲಿ (ಪುಟ ೧೦೩-೧೦೬) ಇರುವ ಕಥಾಪರಿಚಯವನ್ನು ಮುದ್ರಿಸಿ ಪ್ರೇಕ್ಷಕರಿಗೆ ಕೊಡುವುದು ವಾಸಿ.

ಪ್ರವೇಶದಿಂದ ಪ್ರವೇಶಕ್ಕೆ ಹೋಗುವ ಹೊತ್ತಿನಲ್ಲಿ ರಂಗಸ್ಥಲವನ್ನು ಶಬ್ದಶೂನ್ಯವನ್ನಾಗಿ ಬಿಡದೆ, ಪ್ರೇಕ್ಷಕರು ಬೇರೆ ಮಾತುಕತೆ ಬೆಳೆಸುವುದಕ್ಕೆ ಅವಕಾಶವಿಲ್ಲದಂತೆ ಮುಂದಿನ ಪ್ರವೇಶದ ಕಥಾಪರಿಚಯವನ್ನು ಧ್ವನಿವರ್ಧಕ ಯಂತ್ರದಿಂದ ಅವರ ಕಿವಿಗೆ ತುಂಬಿದರೆ, ಕಥೆಯ ಧಾರೆ ಕತ್ತರಿಸಿಹೋಗದೆ ನಿರಂತರವಾಗಿ ನಡೆದು, ನಾಟಕ ಕಳೆಕಟ್ಟುತ್ತದೆ.

ಪರಿಶಿಷ್ಟ ೨:

## "ಶ್ರೀ ಬಾಹುಬಲಿ ವಿಜಯಂ"

## ಮೊದಲನೆಯ ಸಲ (೧೪. ೧೨. ೫೨) ಆಡಿದಾಗ ಭಾಗವಹಿಸಿದವರು

---

**ಹಿನ್ನೆಲೆಯ ಸಂಗೀತ:**

ವೈಣಿಕವಿದ್ವಾನ್ ಶ್ರೀ ಎಲ್. ರಾಜಾರಾಯರು

**ನೇಪಥ್ಯಗಾನ:**

ಗಮಕವಿದ್ವಾನ್ ಶ್ರೀ ಎಂ. ರಾಘವೇಂದ್ರರಾವ್

**ಪಾತ್ರವರ್ಗ**

| | | |
|---|---|---|
| ೧. | ಸೂತ್ರಧಾರ: | ಶ್ರೀ ಎಂ. ರಾಘವೇಂದ್ರರಾವ್ |
| ೨. | ಭರತ: | ಶ್ರೀ ಎಚ್. ಎಸ್. ನಾರಾಯಣರಾವ್ |
| ೩. | ಬಾಹುಬಲಿ: | ಶ್ರೀ ಎಂ. ಎಸ್. ರಾಮಚಂದ್ರರಾವ್ |
| ೪. | ಪುರೋಹಿತ: | ಶ್ರೀ ಜಿ. ಅಶ್ವತ್ಥನಾರಾಯಣ |
| ೫. | ಮಂತ್ರಿ ೧: | ಶ್ರೀ ಎಂ. ಎಸ್. ನಾರಾಯಣರಾವ್ |
| ೬. | ,, ೨: | ಶ್ರೀ ಜಿ. ಎಸ್. ನಂಜುಂಡರಾವ್ |
| ೭. | ಸಂಧಿವಿಗ್ರಹಿ: | ಶ್ರೀ ಡಿ. ಕೃಷ್ಣಮೂರ್ತಿ |
| ೮. | ದೂತ: | ಶ್ರೀ ಸಿ. ಎಂ. ವಾಸುದೇವಮೂರ್ತಿ |
| ೯. | ಚೇಟರಿ ೧: | ಶ್ರೀ ಎ. ಅನಂತಸ್ವಾಮಿರಾವ್ |
| ೧೦. | ,, ೨: | ಶ್ರೀ ಕೆ. ಆರ್. ಅಶ್ವತ್ಥನಾರಾಯಣರಾವ್ |

**ಅಭಿನಯ ನಿರ್ದೇಶಕರು:**

ಶ್ರೀ ಆರ್. ಎಸ್. ರಾಮರಾವ್

ಶ್ರೀ ಎಸ್. ವೆಂಕಟಾಚಲಪತಿ

# ಹಿನ್ನೆಲೆಯ ಗಾನ

ಔಚಿತ್ಯದ ಎಲ್ಲೆ ಮೀರದ ಹಿನ್ನೆಲೆಯ ಸಂಗೀತವು ನಾಟಕದ ಭಾವ ವ್ಯಂಜನ ಮತ್ತು ರಸಪುಷ್ಟಿಗಳಿಗೆ ಅತ್ಯಂತ ಸಹಕಾರಿಯೆಂಬುದು ಆಧುನಿಕ ನಾಟಕಪ್ರದರ್ಶನಗಳಲ್ಲಿ ಪ್ರಯೋಗ ಪರೀಕ್ಷೆಗಳಿಂದ ಅನುಭವವಾಗಿದೆ.

ಭಾವ ರಸ ಸನ್ನಿವೇಶಗಳಿಗೆ ಸರಿಹೊಂದುವ ರಾಗಗಳ ಆಯ್ಕೆಯೂ, ಆ ರಾಗಗಳ ಹಿತ ಮಿತ ಪ್ರಯೋಗ ವಿಧಾನವೂ,—ಎಂದರೆ ನಾಟಕದ ಒಟ್ಟು ಅಂದಕ್ಕೆ ಕುಂದಾಗದಂತೆ ಇವನ್ನು ನಿರ್ವಹಿಸುವುದು— ಬಹು ಕಷ್ಟಸಾಧ್ಯವಾದ ಕೆಲಸ. ನಟರು ಆಡುವ ಸಂಭಾಷಣೆಗಿಂತ ಗಾನ ಗಟ್ಟಿಯಾಗಿ ಕೇಳಿಸಬಾರದು, ಮತ್ತು ಸಂಭಾಷಣೆಯಲ್ಲಿನ ಮಾತುಗಳ ಶಕ್ತಿಯನ್ನೂ ಆ ಮಾತುಗಳಲ್ಲಿ ಅಡಗಿರುವ ಭಾವಸ್ವಾರಸ್ಯವನ್ನೂ ಪ್ರೇಕ್ಷಕರು ಗ್ರಹಿಸುವಂತೆಯೂ ಸನ್ನಿವೇಶಕ್ಕೆ ತಕ್ಕ ಒಂದು ವಾತಾವರಣವನ್ನು ಅನುಭವಿಸುವಂತೆಯೂ ಮಾಡುವುದೇ ಹಿನ್ನೆಲೆಯ ಗಾನದ ಪರಮಪ್ರಯೋಜನ.

ಈ ಏರ್ಪಾಟಿಗೆ ಎರಡು ಅಥವಾ ಮೂರು ತಂತ್ರೀವಾದ್ಯಗಳ ಗೋಷ್ಠಿ ಅವಶ್ಯ. ಸನ್ನಿವೇಶಕ್ಕೆ ತಕ್ಕಂತೆ ತೀವ್ರ ಅಥವಾ ಸಾವಧಾನದ ರೀತಿಯಲ್ಲಿ ಸಂಗೀತವನ್ನು ನಿರ್ವಹಿಸುವ ಜಾಣ್ಮೆ ವಾದ್ಯಗಾರನಿಗೆ ಇರಬೇಕು.

"ಬಾಹುಬಲಿ ವಿಜಯ"ವನ್ನು ಅಂದು (ತಾ|| ೧೪—೧೨—೧೯೫೨ನೆಯ ಭಾನುವಾರ) ರಂಗಭೂಮಿಯ ಮೇಲೆ ಯಶಸ್ವಿಯಾಗಿಸಲು ನಡೆದ ಏರ್ಪಾಟುಗಳಲ್ಲಿ ಹಿನ್ನೆಲೆಯ ಗಾನದ ಜೋಡಣೆಯೂ ಒಂದು ಕಾರಣವೆಂದು ಆ ದಿನದ ರಸಜ್ಞ ಪ್ರೇಕ್ಷಕರು ಸಮ್ಮತಿಸಿದ್ದಾರೆ.

ಈ ನಾಟಕದಲ್ಲಿ ಸನ್ನಿವೇಶಕ್ಕೆ ತಕ್ಕಂತೆ ಪ್ರಯೋಗಿಸಲಾದ ರಾಗಗಳ ವಿವರ ಹೀಗಿದೆ:

| ರಾಗ | ವಸ್ತು ಸಂದರ್ಭ | ಪುಟ |
|---|---|---|
| (೧) ಕೇದಾರ— | | |
| | ಪ್ರವೇಶ ೧. ಭರತನ ಚಕ್ರರತ್ನಸ್ಖಲನದ ಪ್ರಸಂಗ. | ೭ |
| | (ದೃಶ್ಯ ಪ್ರಾರಂಭದಿಂದ: . . . ದೇವ, ಬಾಹುಬಲಿ ಬಲ್ಲಿದನಂ.) | ೨೧-೨೩ |

| ರಾಗ | ವಸ್ತು ಸಂದರ್ಭ | ಪುಟ |
|---|---|---|
| (೨) ಕಲ್ಯಾಣಿ— | | |
| | ಪ್ರವೇಶ ೧. ಭರತನಿಗೆ ಬಾಹುಬಲಿಯ ಮೇಲೆ ಕೋಪ. | |
| | (ಏನ್! ಏನೋ! . . . ಮಹಾಸಂಧಿ ವಿಗ್ರಹಿಗೆ ಬೆಸಸಿಂ) | ೨೩-೨೭ |
| (೩) ಖರಹರಪ್ರಿಯ— | | |
| | ಪ್ರವೇಶ ೨. ಬಾಹುಬಲಿಗೆ ಭರತನ ಸಂದೇಶಕಥನ, ಬಾಹುಬಲಿಯ ಪ್ರತಿಕ್ರಿಯೆ ಮತ್ತು ಯುದ್ಧನಿರ್ಧಾರ. | |
| | (ದೃಶ್ಯ ಪ್ರಾರಂಭದಿಂದ : . . . 'ಅಗ್ರಜನೇನ್ ಬೆಸಸಿರ್ಕುಂ') | ೨೮-೩೧ |
| (೪) ಶಂಕರಾಭರಣ— | | |
| | ಪ್ರವೇಶ ೨. (ಎನ್ನಣುಗದಮ್ಮನಿಲ್ಲದೆ . . . ಅಡಕಿಲ್ವೆಸರಂ) | ೩೧-೩೩ |
| (೫) ಹಂಸಧ್ವನಿ— | | |
| | ಪ್ರವೇಶ ೨. (ಚಕ್ರಂ ಪುಟ್ಟಿದೊಡೆ . . . ಸೇನೆ ಕಾಣ್ಬ್ರ) | ೩೩-೩೪ |
| (೬) ಧನ್ಯಾಸಿ— | | |
| | ಪ್ರವೇಶ ೩. ಭರತನ ಸಂಗ್ರಾಮನಿರ್ಧಾರ. | ೩೫ |
| (೭) ಆನಂದಭೈರವಿ— | | |
| | ಪ್ರವೇಶ ೪. ಧರ್ಮಯುದ್ಧ; ಭರತನ ಪರಾಭವ. | |
| | (ಇವರಿರ್ಬರ್ . . . ಧರ್ಮಯುದ್ಧ ವ್ಯತಿಕರಂ ಸಂದುದು) | ೩೬-೩೮ |
| (೮) ಅಠಾಣ— | | |
| | (ಕವಿಯೂಥಪತಿಗಳ್ . . . ಮಲ್ಲಯುದ್ಧಮಂ ನೋಟ್ಪಂ) | ೩೮-೩೯ |
| (೯) ಮೋಹನ— | | |
| | (ಅದೊ ಮಲ್ಲಯುದ್ಧದೊಳ್ . . . ಆರ್ಕುಮೆ ವಜ್ರಂ) | ೩೯-೪೨ |
| (೧೦) ಬೌಳಿ— | | |
| | (ನೆಲಸುಗೆ ನಿನ್ನ ಪಕ್ಷದೊಳೆ . . . ಮತ್ತ್ರಾಜ್ಯಸಾಮ್ರಾಜ್ಯಮುಂ) | ೪೨-೪೩ |
| (೧೧) ನೀಲಾಂಬರಿ— | | |
| | ಪ್ರವೇಶ ೫ ಮತ್ತು ೬. ಬಾಹುಬಲಿಯ ತಪಸ್ಸಿದ್ಧಿ | ೪೪-೪೯ |

[ಪ್ರಸ್ತಾವನೆಯಲ್ಲಿರುವ ಪದ್ಯಗಳೂ ಮಧ್ಯೇ ಮಧ್ಯೇ ನೇಪಥ್ಯದಿಂದ ಪ್ರಸಾರವಾದ ಪದ್ಯಗಳೂ ಸಂದರ್ಭೋಚಿತವಾಗಿ ಬೇರೆ ಬೇರೆ ರಾಗಗಳಲ್ಲಿ ಹಾಡಲ್ಪಟ್ಟುವು.]

**ಎಲ್. ರಾಜಾರಾವ್.**

**ಪರಿಶಿಷ್ಟ ೪ :**

# "ಶ್ರೀ ಬಾಹುಬಲಿ ವಿಜಯಂ"

## ಕಥಾಪರಿಚಯ

**ಪ್ರಸ್ತಾವನೆ:** ಸೂತ್ರಧಾರನು ಚತುರ್ವಿಂಶತಿ ತೀರ್ಥಂಕರರನ್ನೂ ಆದಿಬ್ರಹ್ಮನನ್ನೂ ಶ್ರೀ ಗೊಮ್ಮಟ ಜಿನನನ್ನೂ ಸ್ತುತಿಯಿಸಿ, ಬಾಹುಬಲಿಯ ಭವ್ಯಕಥೆಯನ್ನು ನಿರೂಪಿಸಿ, ಚಕ್ರವರ್ತಿಯಾದ ಭರತನು ಅಯೋಧ್ಯೆಗೆ ಬರುತ್ತಿರುವನೆಂದು ವಿಜ್ಞಾಪಿಸುತ್ತಿರುವಾಗಲೆ ಚಕ್ರರತ್ನವು ಅಯೋಧ್ಯೆಯ ಹೊರಗೆ ತಡೆದು ನಿಂತ ಸುದ್ದಿ ಬರುತ್ತದೆ.

**ಪ್ರವೇಶ ೧:** ಚಕ್ರ ನಡೆಯದೆ ನಿಂತದ್ದು ಭರತನಿಗೆ ಅರ್ಥವಾಗದು. ಅವನ ತಮ್ಮಂದಿರು ಅವನಿಗೆ ಎರಗದಿರುವುದೆ ಕಾರಣವೆಂದು ಪುರೋಹಿತ ಹೇಳುತ್ತಾನೆ. ಭರತನಿಗೆ ಕೋಪ ಬಂದು, ತಮ್ಮಂದಿರಿಗೆ ಹೇಳಿಕಳಿಸುತ್ತಾನೆ. ಅವರು ಎರಗಲೊಲ್ಲದೆ, ತಪಸ್ಸಿಗೆ ಹೋಗುತ್ತಾರೆ. ಸ್ವಂತ ತಮ್ಮಂದಿರೇ ಹೀಗೆ ತನ್ನನ್ನು ನಿರಾಕರಿಸಿದ ಮೇಲೆ, ತನ್ನ ಮಲತಮ್ಮನಾದ ಬಾಹುಬಲಿ ಏನು ಮಾಡುವನೋ ಎಂಬ ಕಳವಳದಿಂದಲೇ ಚಕ್ರವರ್ತಿ ಬಾಹುಬಲಿಯ ಬಳಿಗೆ ಸಂಧಿವಿಗ್ರಹಿಯನ್ನು ಕಳಿಸುತ್ತಾನೆ.

**ಪ್ರವೇಶ ೨:** ಬಾಹುಬಲಿಯ ಅರಮನೆಗೆ ಸಂಧಿವಿಗ್ರಹಿ ಬಂದು, ಬಾಹುಬಲಿಯ ವರ್ಚಸ್ಸಿಗೆ ಬೆರಗಾಗುತ್ತಾನೆ. ತನ್ನನ್ನು ಸ್ವಾಗತಿಸಿದ ದೊರೆಗೆ ಚಕ್ರವರ್ತಿಯ ದಿಗ್ವಿಜಯವನ್ನೆಲ್ಲ ವರ್ಣಿಸಿ ಹೇಳಿ, ಪ್ರಕೃತದ ಪ್ರಸ್ತಾಪವನ್ನು ಎತ್ತಿಕೊಂಡು, ಬಾಹುಬಲಿಯು ಭರತನಿಗೆ ಎರಗಬೇಕೆಂದು ನಯದಿಂದ ಕೇಳಿಕೊಳ್ಳುತ್ತಾನೆ. ಮಹಾ ಅಭಿಮಾನಿಯಾದ ಬಾಹುಬಲಿ ಎರಗಲೊಲ್ಲದೆ ಚಕ್ರಿಯನ್ನು ಧಿಕ್ಕರಿಸುತ್ತಾನೆ. ಭರತನನ್ನು ಯುದ್ಧಕ್ಕೆ ಆಹ್ವಾನಿಸುತ್ತಾನೆ. ಯುದ್ಧ ಅನಿವಾರ್ಯವಾಗುತ್ತದೆ.

**ಪ್ರವೇಶ ೩:** ಸಂಧಿವಿಗ್ರಹಿ ದುಮ್ಮಾನದಿಂದ ಅಯೋಧ್ಯೆಗೆ ಹಿಂದಿರುಗಿ ಭರತನಿಗೆ ಹೇಳುತ್ತಾನೆ: ಬಾಹುಬಲಿ ನಿನಗೆ ಎರಗುವವನಲ್ಲ, ಎಂದು. ಭರತನು ಮಿತಿಮೀರಿದ ಕ್ರೋಧವನ್ನು ಎತ್ತಿಕೊಂಡು, ತಾನೂ ಯುದ್ಧವನ್ನು ನಿಶ್ಚಯಿಸುತ್ತಾನೆ. ಎರಡೂ ಕಡೆ ಯುದ್ಧಸಿದ್ಧತೆಗಳಾಗುತ್ತವೆ.

ಪ್ರವೇಶ ೪: ಭರತ ಬಾಹುಬಲಿಗಳು ಯುದ್ಧಕ್ಕೆ ಸಿದ್ಧರಾಗಿದ್ದಾರೆ. ಆಗ ಎರಡೂಕಡೆಯ ಮಂತ್ರಿಗಳು ಬಂದು, 'ಪ್ರಜಾವಿನಾಶಕರವಾದ ಈ ಕ್ರೂರ ಯುದ್ಧ ಬೇಡ, ದೃಷ್ಟಿಯುದ್ಧ ಜಲಯುದ್ಧ ಮಲ್ಲಯುದ್ಧಗಳೆಂಬ ಅಹಿಂಸಾ ಯುದ್ಧಗಳಲ್ಲಿ ನಿಮ್ಮ ಬಲಗಳನ್ನು ನಿಶ್ಚಯಿಸಿಕೊಳ್ಳಿ' ಎಂದು ಇಬ್ಬರನ್ನೂ ಒಪ್ಪಿಸುತ್ತಾರೆ. ಮೂರು ರೀತಿಯ ಅಹಿಂಸಾ ಯುದ್ಧದಲ್ಲೂ ಭರತನಿಗೇ ಸೋಲಾಗುತ್ತದೆ. ಆಗ ಭರತನು ಕ್ರೋಧದಿಂದ ಕಣ್ಣುಕಾಣದೆ, ಆಡಿದ ಮಾತು ತಪ್ಪಿ, ಬಾಹುಬಲಿಯ ಮೇಲೆ ಚಕ್ರವನ್ನು ಪ್ರಯೋಗಿಸುತ್ತಾನೆ. ಚಕ್ರ ಬಾಹುಬಲಿಯನ್ನು ಘಾತಿಸದೆ ಅವನಿಗೇ ವಿಧೇಯವಾದದ್ದನ್ನು ಕಂಡು, ಭರತನಿಗೆ ಲಜ್ಜೆಯಾಗುತ್ತದೆ. ಆಗ, ರಾಜ್ಯಲೋಭದಿಂದಾಗುವ ಅನಾಹುತಗಳನ್ನು ಬಾಹುಬಲಿ ಕಂಡುಕೊಂಡು, ಸರ್ವತ್ಯಾಗಮಾಡಿ, ತಪಸ್ಸಿಗೆ ನಿಶ್ಚಯಿಸುತ್ತಾನೆ. ಭರತನೂ ತನ್ನ ಅವಿವೇಕಕ್ಕೆ ಪಶ್ಚಾತ್ತಾಪಪಟ್ಟು ಬೇಡಿಕೊಂಡರೂ, ಬಾಹುಬಲಿ ತನ್ನ ನಿಶ್ಚಯವನ್ನೆ ಹಿಡಿದು ನಿಲ್ಲುತ್ತಾನೆ.

ಪ್ರವೇಶ ೫: ಬಾಹುಬಲಿ ನೇರವಾಗಿ ಆದಿತೀರ್ಥಂಕರನ ಸಮವಸರಣಕ್ಕೆ ಬಂದು, ಅಲ್ಲಿ ಜಿನದೀಕ್ಷೆಯನ್ನು ಪಡೆದವನು, ತಪಸ್ಸನ್ನು ಕೈಕೊಂಡು, ಪ್ರತಿಮಾಯೋಗದಲ್ಲಿ ನಿಲ್ಲುತ್ತಾನೆ.

ಪ್ರವೇಶ ೬: ಒಂದು ವರ್ಷ ಅನ್ನನೀರುಗಳಿಲ್ಲದೆ ಕದಲದೆ ನಿಂತಲ್ಲೆ ತಪಸ್ಸು ಮಾಡುತ್ತಾನೆ. ಸುತ್ತಲೂ ಹುತ್ತಗಳು ಬಳ್ಳಿಗಳು ಬೆಳೆದುಕೊಳ್ಳುತ್ತವೆ. ಖೇಚರಿಯರು ಆ ಮುನಿಯನ್ನು ಸೇವಿಸುತ್ತಿರುತ್ತಾರೆ. ಒಂದು ವರ್ಷವಾದರೂ ಆತನಿಗೆ ಕೇವಲಜ್ಞಾನವಾಗಿರುವುದಿಲ್ಲ. ಅದರ ಕಾರಣವನ್ನು ಆದಿನಾಥನಿಂದ ತಿಳಿದುಬಂದ ಭರತನು ಅದನ್ನು ಬಾಹುಬಲಿಗೆ ಹೇಳುತ್ತಾನೆ. ಅದನ್ನು ಕೇಳಿದ ಕೂಡಲೆ, ಒಳಗಿದ್ದ ಮಾನವೆಂಬ ಕಷಾಯ ಕರಗಿಹೋಗಿ, ಬಾಹುಬಲಿಗೆ ಕೇವಲಜ್ಞಾನವುಂಟಾಗುತ್ತದೆ. ದೇವತೆಗಳು ಬಂದು ಪೂಜಿಸಿ ಹೋಗುತ್ತಾರೆ.

ಬಾಹುಬಲಿ ಎಂಬ ಶ್ರೀ ಗೊಮ್ಮಟಜಿನನ ವಸ್ತುಸ್ತವ ಗುಣಸ್ತವ ರೂಪಸ್ತವಗಳ ಭರತವಾಕ್ಯದಿಂದ ದೃಶ್ಯಾವಲಿ ಮುಗಿಯುತ್ತದೆ.

ಪರಿಶಿಷ್ಟ ೫:

# ಶ್ರೀ ಗೋಮಟ ಶಿಲ್ಪ

## ಕಥಾಪರಿಚಯ

**ಪ್ರಸ್ತಾವನೆ:** ಸೂತ್ರಧಾರನು ಶ್ರೀ ಗೊಮ್ಮಟನನ್ನು ಸ್ತುತಿಯಿಸಿ, ಪ್ರಕೃತವನ್ನು ವಿಜ್ಞಾಪಿಸಿಕೊಳ್ಳುತ್ತಾನೆ.

**ಪ್ರವೇಶ ೧:** ಕರ್ಣಾಟಕ ದೇಶ, ದಕ್ಷಿಣ ಮಧುರೆ, ಗಂಗರಾಜ ರಾಚಮಲ್ಲ, ಆತನ ಸರ್ವಾಧ್ಯಕ್ಷ ಚಾವುಂಡರಾಯ, ಚಾವುಂಡರಾಯನು ಹಲವಾರು ವೀರರನ್ನು ಕಾಳಗದಲ್ಲಿ ಕೊಂದದ್ದು, ಆತನ ಗುಣಾವಳಿ—ಇವು ಗಳನ್ನು ನೇಪಥ್ಯಗಾನ ಕೊಂಡಾಡುತ್ತದೆ.

**ಪ್ರವೇಶ ೨:** ವಂದಿಗಳು ಚಾವುಂಡರಾಯನ ಬಿರುದಾವಳಿಗಳನ್ನು ಹೊಗಳುತ್ತಾರೆ. ಪೌರಾಣಿಕನು ಭರತ-ಬಾಹುಬಲಿಗಳಿಗೆ ಯುದ್ಧವಾಗಿ, ಬಾಹುಬಲಿ ತಪಸ್ಸಿಗೆ ನಿಂತು ಕೇವಲಿಯಾದ ಕಥೆಯನ್ನು ಪುರಾಣ ಹೇಳು ತ್ತಾನೆ. ಭರತನು ಪೌದನಪುರದಲ್ಲಿ ಬಾಹುಬಲಿ ಕೇವಲಿಯ ಪ್ರತಿಮೆಯನ್ನು ಮಾಡಿಸಿದ ಪ್ರಸ್ತಾಪ ಬರುತ್ತದೆ. ಕಾಲಕ್ರಮದಲ್ಲಿ ಆ ಪ್ರತಿಮೆಯ ಸುತ್ತ ಕಾಡು ಬೆಳೆದು, ಅಲ್ಲಿ ಕುಕ್ಕುಟಸರ್ಪಗಳ ಹಾವಳಿ ಹೆಚ್ಚಿ, ಆ ಜಿನನಿಗೆ ಕುಕ್ಕುಟೇಶ್ವರನೆಂದು ಹೆಸರಾದುದು ತಿಳಿದುಬರುತ್ತದೆ.

**ಪ್ರವೇಶ ೩:** ಚಾವುಂಡರಾಯನ ತಾಯಿಯಾದ ಕಾಳಲದೇವಿ ಆ ಕತೆ ಕೇಳಿ, ಕುಕ್ಕುಟೇಶ್ವರನನ್ನು ಕಾಣುವವರೆಗೆ ಮಧುರಾಹಾರವನ್ನು ಮುಟ್ಟು ವುದಿಲ್ಲವೆಂದು ವ್ರತ ತೊಡುತ್ತಾಳೆ. ತಾಯಿಯ ಅಭೀಷ್ಟವನ್ನು ಸಲ್ಲಿಸಲು ಚಾವುಂಡರಾಯನು ತನ್ನ ತಾಯಿ ಹೆಂಡತಿ ಮಕ್ಕಳು ಗುರು ಪರಿವಾರಗಳೊಡನೆ ಪೌದನಪುರಿಗೆ ಯಾತ್ರೆ ಹೊರಡುತ್ತಾನೆ. ಮಾರ್ಗದಲ್ಲಿ ಕರ್ಣಾಟಕದ ಕಳ್ಬಪ್ಪು ಕ್ಷೇತ್ರಕ್ಕೆ ಬರುತ್ತಾರೆ.

**ಪ್ರವೇಶ ೪:** ಚಾವುಂಡರಾಯನ ಗುರುಗಳಾದ ಆಚಾರ್ಯ ನೇಮಿ ಚಂದ್ರರು ಚಂದ್ರಗಿರಿಯ ಮೇಲಿರುವ ಶಾಸನಗಳನ್ನು ಓದುತ್ತಾ, ಅಲ್ಲಿ ಸಲ್ಲೇ ಖನದಿಂದ ಮುಡಿಪಿದವರ ಪರಿಚಯಮಾಡಿ, ತತ್ತ್ವೋಪದೇಶಗೆಯ್ಯುತ್ತಾರೆ.

**ಪ್ರವೇಶ ೫:** ಆ ರಾತ್ರಿ ಚಂದ್ರಗುಪ್ತಬಸದಿಯಲ್ಲಿ ಎಲ್ಲರೂ ನಿದ್ರಿಸಿರುವಾಗ, ಕನಸಿನಲ್ಲಿ ಯಕ್ಷಿಯರು ಕಾಣಿಸಿಕೊಂಡು, ಬಾಹುಬಲಿಯ ದರ್ಶನ ಸೌಲಭ್ಯವನ್ನು ಚಾವುಂಡರಾಯನಿಗೆ ತಿಳಿಸುತ್ತಾರೆ. ಅದರಂತೆ ಚಾವುಂಡರಾಯನು ಸೂರ್ಯೋದಯಕ್ಕೆ ಎದ್ದು, ದೊಡ್ಡ ಬೆಟ್ಟದ ಕಡೆಗೆ ಬಾಣ ಬಿಡಲು ಅಖಂಡದ ಗುಂಡು ಒಡೆದು, ಅದರ ಆಚೆ ಶ್ರೀ ಬಾಹುಬಲಿಯ ವಿಗ್ರಹ ಪ್ರತ್ಯಕ್ಷವಾಗುತ್ತದೆ. ಅಲ್ಲಿಗೆ ಹೋಗುವ ದಾರಿಯನ್ನು ಸವರಿಸಿ, ವಿಗ್ರಹಕ್ಕೆ ಒಪ್ಪವಿಕ್ಕಿಸಿದ ಅನಂತರ ಚಾವುಂಡರಾಯನ ತಾಯಿ ಹೆಂಡತಿ ಮಕ್ಕಳು ಗುರು ಎಲ್ಲರೂ ಆ ಬಿಂಬವನ್ನು ಕಂಡು ಆನಂದಸಮುದ್ರದಲ್ಲಿ ಮುಳುಗಿ ತೇಲುತ್ತಾರೆ.

**ಪ್ರವೇಶ ೬:** ಜಿನಧರ್ಮಪತಾಕೆ ಎನಿಸಿದ ಅತ್ತಿಮಬ್ಬೆ ತನಗೆ ಆಶ್ರಿತನಾದ ಕವಿರತ್ನನೊಂದಿಗೆ ಬಾಹುಬಲಿಯ ಸಂದರ್ಶನಕ್ಕೆ ಬಂದಿದ್ದಾಳೆ, ಬೆಟ್ಟ ಹತ್ತುತ್ತಿದ್ದಾಳೆ. ಆಕೆಯನ್ನು ಇದಿರುಗೊಳ್ಳಲು ಚಾವುಂಡರಾಜಾದಿಗಳು ಬೆಟ್ಟದಿಂದ ಇಳಿದುಬರುತ್ತಾ, ಜಿನಾಂತಿಕದಲ್ಲಿ ಅವರು ಸಂಧಿಸಿದಾಗ, ಅತ್ತಿಮಬ್ಬೆಯ ಆಯಾಸಪರಿಹಾರವಾಗುವಂತೆ ಅಕಾಲದ ಮಳೆ ಬೀಳುತ್ತದೆ. ಆಕೆಯ ಮಹಿಮೆಯನ್ನು ಕಂಡು ಎಲ್ಲರೂ ಕೀರ್ತಿಸುತ್ತಾರೆ.

**ಪ್ರವೇಶ ೭:** ವಿಗ್ರಹದ ಸಂದರ್ಶನಕ್ಕೆ ಕನ್ನಡಿಗರೂ ತಮಿಳರೂ ಮಹಾರಾಷ್ಟ್ರೀಯರೂ ತಂಡತಂಡವಾಗಿ ಬಂದಿದ್ದಾರೆ. ಅತ್ತಿಮಬ್ಬೆಯೂ ಚಾವುಂಡರಾಯನೂ ನೇಮಿಚಂದ್ರ ಅಜಿತಸೇನ ಆಚಾರ್ಯರೂ ಗೊಮ್ಮಟನ ಅತಿಶಯವನ್ನು ಕೊಂಡಾಡುತ್ತಾರೆ. ಆಗ, ಅತ್ತಿಮಬ್ಬೆ ರನ್ನನಿಂದ ಅಜಿತಪುರಾಣವನ್ನು ಬರೆಯಿಸಬೇಕೆಂದು ಚಾವುಂಡರಾಯನು ಪ್ರಾರ್ಥಿಸುತ್ತಾನೆ. ಅತ್ತಿಮಬ್ಬೆಯ ತೃಪ್ತಿಗಾಗಿ ರನ್ನನು ಅಜಿತಪುರಾಣವನ್ನು ಬರೆಯುವೆನೆಂದು ಪ್ರತಿಜ್ಞೆಮಾಡುತ್ತಾನೆ. ಭರತವಾಕ್ಯದಿಂದ ಈ 'ಧಾರ್ಮಿಕ ದೃಶ್ಯಾವಲಿ' ಮುಗಿಯುತ್ತದೆ.

ಪರಿಶಿಷ್ಟ ೬:

## ಪ್ರೇಕ್ಷಕ ಶ್ರೀ ಪ್ರ. ತಿ. ನ. ಅವರ ಪ್ರಶಂಸೆ

ಸರಳತೆ, ಸಹಜತೆ, ಸಹೃದಯತೆ, ಸರಸತೆ, ಗಾಂಭೀರ್ಯ ಮತ್ತು ಶಿಸ್ತು ಇಷ್ಟು ಗುಣಗಳನ್ನೂ ತೋರಿ ತೋಷಗೊಳಿಸುವ ಗೋಷ್ಠಿಗಳು ಅಪೂರ್ವ. ಇಂಥ ಗೋಷ್ಠಿಗಳಲ್ಲಿ ಭಾಗವಹಿಸುವ ಮಾತ್ರದಿಂದಲೇ ಮನಸ್ಸು ನಿರ್ಮಲವೂ ಉದಾತ್ತವೂ ಪ್ರಸನ್ನವೂ ಆಗುತ್ತದೆ. ಗೋಖಲೆ ಸಂಸ್ಥೆಯ ವ್ಯಾಸಂಗ ಗೋಷ್ಠಿಯ ಸ್ನೇಹಿತರು ಇಂಥ ಗೋಷ್ಠಿಯೊಂದನ್ನು ಮೊನ್ನೆ ಮೊನ್ನೆ ಏರ್ಪ ಡಿಸಿದ್ದರು. ಅಲ್ಲಿ ದೊರೆಸ್ವಾಮಿಯವರ ಮನೋಹರವಾದ ಕೊಳಲಿನಿಂದ ಪರಿ ಷ್ಕೃತವಾದ ಚಿತ್ತವುಳ್ಳ ರಸಜ್ಞರ ಮುಂದೆ ಶ್ರೀ ರಾಜರತ್ನಂ ಪ್ರಣೀತವಾದ ಪಂಪ ಮಹಾಕವಿಯ ಬಾಹುಬಲಿ ವಿಜಯ ನಾಟಕ ರಂಗದ ಮೇಲೆ ಜರು ಗಿತು. ಆ ದೃಶ್ಯವನ್ನು ನೋಡಿದ ಅಪೂರ್ವಾನಂದಲಾಭಕ್ಕೆ ನಾನು ಸಲಿಸುವುದು ಈ ವಾಕ್ಸುಮಾಂಜಲಿ ಮಾತ್ರ.

ಬಾಹುಬಲಿ ಎಂದರೆ ಮತ್ತಾರೂ ಅಲ್ಲ; ನಮ್ಮ ಗೊಮ್ಮಟೇಶ್ವರ. ಆಕಾಶಕ್ಕೆ ಆಕಾಶ ಉಪಮೆ, ಸಾಗರಕ್ಕೆ ಸಾಗರ ಉಪಮೆ, ಗೊಮ್ಮಟೇಶ್ವರ ವಿಗ್ರಹದ ಮುಗ್ಧವೂ, ಮಂದಹಾಸಮಧುರವೂ, ಗಂಭೀರಸುಂದರವೂ ಆದ ಮುಖಕ್ಕೆ ಆ ಮುಖ ಮಾತ್ರ ಸಾಟಿ. ಸಾಮಾನ್ಯವಾಗಿ ಗಂಡಸರು ಹೆಂಗ ಸಾಗುವುದಕ್ಕೆ ಆಸೆಪಡುವುದು ಅಪೂರ್ವ; ಆದರೆ ಆ ವಿಗ್ರಹದ ನುಣುಪಾದ ತುಂಬುಕಪೋಲಗಳನ್ನೂ, ಎಳಸಾದ ತುಟಿಗಳನ್ನೂ, ವದನದ ಮುಗ್ಧಭಾವ ವನ್ನೂ ನೋಡಿದರೆ, ತಾಯಂತೆ ಅದನ್ನು ಮುದ್ದಿಡುವ ಬಯಕೆಗೆ ಪುರುಷ ಸಿಕ್ಕುತ್ತಾನೆ. ಇಂಥ ಮೂರ್ತಿಯನ್ನು ರಂಗಸ್ಥಳದಲ್ಲಿ ಪ್ರತಿರೂಪಿಸುವುದೆಂದರೆ ಸಾಹಸವೇ ಸರಿ. ಆದರೆ ಸಾಹಸಿಗಳಾದ ಶ್ರೀ ರಾಜರತ್ನಂ ಅಂಥ ಒಬ್ಬರನ್ನು ಸಂಪಾದಿಸಿ, ಶ್ರೀ ಆರ್. ಎಸ್. ರಾಮರಾಯರ ಶಿಕ್ಷಣಕ್ಕೆ ಅಳವಡಿಸಿ, ತಕ್ಕ ವೇಷ ಭೂಷಣಗಳಿಂದ ಸಿಂಗರಿಸಿ, ಉಚಿತ ಪಾತ್ರ ಪರಿವಾರಗಳಿಂದ ಉಜ್ವಲಗೊಳಿಸಿ ರಂಗಕ್ಕೆ ತಂದು ತೋರಿ ಯಶಸ್ವಿಗಳಾದುದು ಅಂದಿನ ಸೋಜಿಗ.

ಬಾಹುಬಲಿಯ ವಿಗ್ರಹ ಎಷ್ಟು ಮಹಾದ್ಭುತವಾಗಿ ಕಂಗೊಳಿಸು

ತ್ರಿದೆಯೋ ಆತನ ಕತೆ ಕೂಡ ಅಷ್ಟೇ ಭವ್ಯವಾಗಿದೆ. ಆದಿತೀರ್ಥಂಕರನಿಗೆ ಭರತೇಶ್ವರ ಬಾಹುಬಲಿ ಮೊದಲಾಗಿ ನೂರು ಜನ ಗಂಡು ಮಕ್ಕಳು. ಭರತನು ತನ್ನ ಪೂರ್ವಜನ್ಮದ ಪುಣ್ಯದಿಂದ ತನಗೆ ದೊರೆತ "ಚಕ್ರರತ್ನ"ದ ಬೆಂಬಳಿಯಲ್ಲಿ ದಿಗ್ವಿಜಯವನ್ನು ಮಾಡಿ ರಾಜಧಾನಿಗೆ ಮರಳಿ ಬರುತ್ತಿರುವಾಗ ಆತನನ್ನು ಆ ಚಕ್ರರತ್ನ ಆತನ ರಾಜಧಾನಿಯೊಳಕ್ಕೆ ಕರೆದೊಯ್ಯಲಾರದೆ ಹೊರವಲಯದಲ್ಲೇ ನಿಂತುಹೋಗುತ್ತದೆ. ಅದರ ಅಪ್ರತಿಹತವಾದ ಗತಿಯನ್ನು ಕುಂಠಿಸಿದವರು ಭರತನ ಏಕಚ್ಛತ್ರಾಧಿಪತ್ಯವನ್ನು ಒಪ್ಪಿಕೊಳ್ಳದ ಆತನ ತಮ್ಮಂದಿರು. ತಂದೆ ತಮಗೆ ವಿಭಾಗಿಸಿ ಕೊಟ್ಟ ನೆಲವನ್ನು ತಾವು ಉಪಭೋಗಿಸುವಾಗ ಅಣ್ಣನ ಹಂಗೇಕೆ? ಎಂದು ಅವರ ಹಮ್ಮು; ತನ್ನ ಹಂಗಿನಲ್ಲಿ ಇತರ ಎಲ್ಲ ರಾಜರುಗಳು ಹೇಗೋ ಹಾಗೆಯೇ ತನ್ನ ತಮ್ಮಂದಿರೂ ಬಾಳಬೇಕೆಂದು ಭರತನ ಹಮ್ಮು. ಈ ಎರಡು ಸಮಾಹಂಕಾರಗಳ ನಡುವೆ ಚಕ್ರರತ್ನ ನಡೆಗೆಟ್ಟು ನಿಲ್ಲುತ್ತದೆ. ನೂರು ಜನ ತಮ್ಮಂದಿರು ಅಣ್ಣನೊಡನೆ ಸೆಣಸಲೊಪ್ಪದೆ ಆ ನೆಲವನ್ನು ಬಿಟ್ಟು ತಪಸ್ಸಿಗೆ ತೆರಳುತ್ತಾರೆ. ಬಾಹುಬಲಿ ಮಾತ್ರ ಭರತನ ಸಾಮ ದಾನ ಭೇದೋಪಾಯಗಳನ್ನು ತಿರಸ್ಕರಿಸಿ ದಂಡವನ್ನೆದುರಿಸುವುದಕ್ಕೂ ಸಿದ್ಧನಾಗುತ್ತಾನೆ. ಮಂತ್ರಿಗಳ ಸಂಧಾನದ ಫಲವಾಗಿ ಉಭಯ ಸೈನ್ಯಗಳು ಕಾದಾಡಿ ಮಡಿಯುವುದು ತಪ್ಪಿ, ಅಣ್ಣ ತಮ್ಮಂದಿರಿಬ್ಬರೇ ಹೋರಾಡಿ ಜಯಾಪಜಯಗಳನ್ನು ತೀರ್ಮಾನಿಸುವಂತೆ ಏರ್ಪಡುತ್ತದೆ. ದೃಷ್ಟಿಯುದ್ಧ, ಜಲಯುದ್ಧ, ಮಲ್ಲಯುದ್ಧಗಳಾದುವು; ಎಲ್ಲವುಗಳಲ್ಲೂ ಭರತನಿಗೇ ಸೋಲು. ಈ ಸೋಲುಗಳಿಂದ ಕ್ರುದ್ಧನಾದ ಭರತನು ಸ್ಮೃತಿಗೆಟ್ಟು ಕೊನೆಗೆ ತನ್ನ ತಮ್ಮನ ಮೇಲೆ ಚಕ್ರರತ್ನವನ್ನೇ ಪ್ರಯೋಗಿಸಲು ಹೇಸುವುದಿಲ್ಲ. ಆದರೆ ಅದಕ್ಕೆ ಬಾಹುಬಲಿಯ ಮೇಲೆ ಬೀಳುವಷ್ಟು ಪ್ರಭಾವವಿಲ್ಲ. ಆ ಯತ್ನ ಪ್ರದಕ್ಷಿಣದಲ್ಲಿ ಮುಗಿಯುತ್ತದೆ. ಈ ಆಯುಧದ ಪ್ರಯೋಗದಿಂದ ಬಾಹುಬಲಿಯ ಮನಸ್ಸು ಬವಲಾಯಿಸುತ್ತದೆ. ಭರತ ಸ್ವಭಾವತಃ ಮಹಾತ್ಮ, ಸತ್ತ್ವಶಾಲಿ, ಕುಲೀನ, ತೀರ್ಥಂಕರನ ಮಗ, ಕೊರೆಯಿಲ್ಲದ ಸದ್ಗುಣಗಳು ಆತನಲ್ಲಿ ತುಂಬಿವೆ. ಇವುಗಳೆಲ್ಲವನ್ನೂ ಮರೆಸಿ ಆತನನ್ನು ಮೋಹಗೊಳಿಸಿ ಹೇಯ ಕೃತ್ಯಕ್ಕೆಳಸುವಂತೆ ಮಾಡಿದ ಅಹಂಪಿಪಾಸೆಯ ಉಗ್ರತನವನ್ನು ಕಂಡು ಬಾಹುಬಲಿ ವ್ಯಗ್ರನಾಗುತ್ತಾನೆ. ಆ ಪಿಪಾಸೆಯ ಬಾಧೆ ತನಗೂ ತಟ್ಟಿದೆಯೋ

ಏನೋ; ಇದರಿಂದ ಮುಕ್ತನಾಗುವುದು ಹೇಗೆ? ಸ್ವಾಹಂಕಾರನಿರಸನಕ್ಕೆ ಆತನ ಮನಸ್ಸು ಒಲಿದು ವೈರಾಗ್ಯಮುಖವಾಗುತ್ತದೆ. ಆಗ ತನ್ನದಾದ ಸಕಲ ರಾಜ್ಯವನ್ನೂ ರಾಜಧಾನಿಯನ್ನೂ ಅಣ್ಣನಿಗೆ ಬಿಟ್ಟುಕೊಟ್ಟು ಬಾಹುಬಲಿ ಕೇವಲಿಯಾಗುವುದಕ್ಕೆ ಬಯಸಿ ತಪಸ್ಸಿನಲ್ಲಿ ನಿಲ್ಲಲು ದೃಢನಿಶ್ಚಯ ಮಾಡುತ್ತಾನೆ. ಇತ್ತ ಭರತನೂ ಕರಗುತ್ತಾನೆ. ನೂರು ಜನ ತಮ್ಮಂದಿರೂ ತನ್ನ ಅಹಂಮನ್ಯತೆಗೆ ಬೇಸರಿಸಿ ತನ್ನನ್ನು ಅಗಲಿಹೋದುದಕ್ಕಾಗಿ ಶೋಕಿಸುತ್ತಾನೆ. ಈ ಒಬ್ಬನಾದರೂ ತನ್ನೊಂದಿಗೆ ತನಗಿಂತಲೂ ಮಿಗಿಲಾಗಿ ನಿಲ್ಲಲೆಂದು ಮೊರೆಯಿಡುತ್ತಾನೆ, ಮಣಿದು ಬೇಡುತ್ತಾನೆ. ಆದರೆ ಬಾಹುಬಲಿ ತನ್ನ ನಿಶ್ಚಯದಿಂದ ಕದಲುವುದಿಲ್ಲ. ಉಗ್ರತಪಸ್ಸನ್ನಾಚರಿಸಲು ಹೊರಟೇ ಹೋಗುತ್ತಾನೆ.

ಆ ಮಹಾತ್ಮನ ತಪಸ್ಸಿನಲ್ಲಿ ಸಕಲ ಸೃಷ್ಟಿಯೂ ಕುತೂಹಲಗೊಳ್ಳುತ್ತದೆ, ಕ್ಷಿಪ್ರಫಲವನ್ನು ಬಯಸುತ್ತದೆ. ಆದರೆ ಒಂದು ಸಂವತ್ಸರ ಕಳೆದರೂ ಆತ ಸಿದ್ಧಿಯ ಬಗೆಯನ್ನು ಕಾಣದಿರುವುದಕ್ಕಾಗಿ ಖೇಚರಿಯರು ಆಶ್ಚರ್ಯಗೊಳ್ಳುತ್ತಾರೆ. ಆತನ ಮೈಯ ಸುತ್ತ ಲತೆ ಹಬ್ಬಿದುವು, ಹುತ್ತ ಬೆಳೆಯಿತು, ಕುರುಳಲ್ಲಿ ಹಕ್ಕಿಗಳು ಗೂಡು ಕಟ್ಟಿಕೊಂಡವು. ಆದರೆ ಮುಖದಲ್ಲಿ ಮಾತ್ರ ಕಳೆ ತುಂಬಲಿಲ್ಲ. ತನ್ನ ಅಣ್ಣನಿಗೆ ತಾನು ಮರಳಿ ಕೊಟ್ಟ ನೆಲದ ಮೇಲೆಯೇ ತಾನು ನಿಲ್ಲಬೇಕಾಗಿದೆಯಲ್ಲ ಎಂಬ ಮಾನಕಷಾಯ ಬಾಹುಬಲಿಯ ಮನಸ್ಸಿನಲ್ಲಿ ನಿಂತು ಸಂಯಕ್‌ಸಿದ್ಧಿಯನ್ನು ತಡೆದಿತ್ತು. ಅದನ್ನು ತನ್ನ ತಂದೆಯಾದ ವೃಷಭನಾಥನಿಂದ ಅರಿತು ಭರತ ಆ ತಪಃಸ್ಥಾನಕ್ಕೆ ಬಂದು ತಮ್ಮನನ್ನು ಕುರಿತು ಹೀಗೆನ್ನುತ್ತಾನೆ: "ಈ ನೆಲ ಯಾರಿಗೂ ಸೇರಿದುದಲ್ಲ. ತಲೆಯಿಂದ ತಲೆಮೊರೆಗೆ ಅದರ ಯಾಜಮಾನ್ಯ ಕ್ಷಣಕಾಲ ಹರಿದು ಬಂದು ಹೋಗುತ್ತದೆ. ಅದಕ್ಕೆ ಯಾರು ತಾನೆ ಸ್ವಾಮಿಯಾಗಬಲ್ಲರು? ಇದು ನಿನ್ನದೂ ಅಲ್ಲ ನನ್ನದೂ ಅಲ್ಲ; ಈ ವೃಥಾಭಿಮಾನವನ್ನು ಬಿಡು. ಈ ಉಪದೇಶವೂ ನನ್ನ ಸ್ವಂತದ್ದಲ್ಲ; ತಂದೆಯಿಂದ ನನಗೆ ಪ್ರಾಪ್ತವಾದುದು." ಇದನ್ನು ಕೇಳಿ ಬಾಹುಬಲಿಗೆ ತನ್ನ ಮಾನಕಷಾಯ ಕಳೆದುಹೋಗಿ ಜ್ಞಾನೋದಯವಾಗುತ್ತದೆ. ಹೀಗೆ ತನ್ನ ಅಣ್ಣನ ಉಪದೇಶದಿಂದ ತನಗೆ ಪ್ರಾಪ್ತವಾದ ಜ್ಞಾನದ ಪ್ರಭೆಯಿಂದ ಜ್ವಲಿಸುತ್ತಿರುವ ತೇಜಶ್ಶಾಲಿಗೆ ಎಲ್ಲರೂ ಬಲವಂದು ನಮಸ್ಕರಿಸಿ ಆತನನ್ನು ನುತಿಸುತ್ತಾರೆ.

ನಾಟಕ ಇಲ್ಲಿ ಮುಗಿಯುತ್ತದೆ—ಒಂದು ದಿವ್ಯಸ್ವಪ್ನ ಚಿತ್ರದಲ್ಲಿ ಹಾಯ್ದು ಹೋಗುವಂತೆ.

ನಾಟಕ ಸುಮಾರು ಒಂದು ಗಂಟೆಯ ಕಾಲ ಜರುಗಿತೇನೋ, ಆದರೆ ಅದರ ಪ್ರಭಾವ ಮಾತ್ರ ಬಹುಕಾಲ ನಿಲ್ಲತಕ್ಕದ್ದಾಗಿದೆ. ಈ ಪ್ರಭಾವ ಅದಕ್ಕೆ ಬಂದುದು ಕತೆಯ ಭವ್ಯತೆಯಿಂದ ಮಾತ್ರವಲ್ಲ, ಪಂಪನ ದಿವ್ಯವಾಣಿಯಿಂದ ಮಾತ್ರವಲ್ಲ; ಇವನ್ನು ರಂಗಸ್ಥಲಕ್ಕೆ ಅಳವಡಿಸಿ ಪಾತ್ರಗಳಿಂದ ಆಡಿಸಿ ತೋರಿದವರ ಔಚಿತ್ಯಜ್ಞಾನದಿಂದ ಅದು ಈ ಯಶಸ್ವಿತೆಯನ್ನು ಸಂಪಾದಿಸಿತು ಎನ್ನಬೇಕು. ಏಕೆಂದರೆ ಕತೆ ದೊಡ್ಡದು. ಅದರಿಂದ ಅದರ ತಿರುಳನ್ನು ಎತ್ತಿ ತೋರುವುದಕ್ಕೆ ರಸದ ಹದವರಿತ ಜಾಣ್ಮೆ ಬೇಕು. ತಕ್ಕ ಅಲಂಕಾರಗಳುಳ್ಳ ತಕ್ಕ ಪಾತ್ರಗಳಿಂದ ಕತೆಯ ಸಂಭಾಷಣೆಗಳನ್ನೂ ಕ್ರಿಯೆಗಳನ್ನೂ ನಡೆಗೊಳಿಸುತ್ತಾ, ತೋರಲಾಗದುದನ್ನು ಉಚಿತವಾದ ಸಂಗೀತದ ಹಿನ್ನೆಲೆಯಲ್ಲಿ ಮನೋಹರವಾದ ಪದ್ಯಗಳಿಂದ ಕನಸು ಕಟ್ಟುವಂತೆ ತೋರುತ್ತಾ, ಮುಂದೆ ಬರುವ ದೃಶ್ಯದಲ್ಲಿ ಆ ಕನಸನ್ನು ಪ್ರತ್ಯಕ್ಷಗೊಳಿಸಿ ಮುಂದುವರಿಸುತ್ತಾ, ಮರಳಿ ಹಾಡಿನ ಮುಖೇನ ಆ ಕತೆಯನ್ನು ಕನಸಿನ ಮರೆಗೆ ತರುತ್ತಾ—ಹೀಗೆ ದೃಶ್ಯಾದೃಶ್ಯದ ಬೆರಗಿನಲ್ಲಿ ಮನಸ್ಸನ್ನು ಶಾಂತರಸದ ಸ್ಥಾಯೀಭಾವದಲ್ಲಿ ನಿಲ್ಲಿಸುವ ರಂಗನಿರ್ವಾಹಕಲೆಗೆ ಯಾರ ಮನ ಮೆಚ್ಚದು? ಇಂಥ ಸಂಗೀತ, ಇಂಥ ಕಲೆ, ಇಂಥ ಪಾತ್ರ ಪರಿಕರ್ಮಕೌಶಲ, ಇಂಥ ದಿವ್ಯವೂ ಸಂಸ್ಕೃತವೂ ಆದ ಭಾಷೆ, ಇವುಗಳೆಲ್ಲ ನಮ್ಮವು, ನಮ್ಮವೇ ಎಂದುಕೊಳ್ಳುವಾಗ ನಾವು ನಮ್ಮ ಸಾಹಿತ್ಯ ಮತ್ತು ಕಲೆಗಳ ವಿಷಯದಲ್ಲಿ ಪಟ್ಟುಕೊಳ್ಳುವ ಹೀನಾಯ ಕಳೆದು ಹೋಗುತ್ತದೆ. ನಮ್ಮ ಬೆನ್ನು ಮೂಳೆ ಸೆಟ್ಟಗಾಗುತ್ತದೆ. ಉದಾಹರಣೆಗೆ ಈ ಮೂರು ಪದ್ಯಗಳನ್ನು ನೋಡಿ:

ಇದು ಬಾಹುಬಲಿಯ ದೃಷ್ಟಿಗೆ ಭರತ ಸೋತುದರ ವರ್ಣನೆ:

ಲಲಿತಮುಖಸರಸಿಜಂ ನಿ-
ಶ್ಚಳಪಕ್ಷ್ಮಂ ಸ್ತಿಮಿತತಾರಕಂ ಭುಜಬಲಿ ಕ-
ಣ್ಣೊಳೆ ತವೆ ಪೀರ್ವವೊಲೇ ನಿ-
ಶ್ಚಳತನು ನಡೆನೋಡೆ ಭರತರಾಜಂ ಸೋಲ್ತಂ

ಈ ಸೋಲ್ಪೆಯನ್ನು ತನ್ನ ತಲೆ ನಿಸ್ಸತ್ವವಾಗಿ ರುಂಡದಿಂದ ಕಳಚಿ ಬೀಳುವಂತೆ ತಗ್ಗಿಸಿ ತೋರಿಸಿದ ಭರತನ ನಟನೆ ಎಷ್ಟು ಮನೋಹರವಾಗಿತ್ತು!

ಇದು ಬಾಹುಬಲಿ ತಾನು ಗೆದ್ದ ರಾಜ್ಯವನ್ನು ಅಣ್ಣನಿಗೆ ಬಿಟ್ಟುಕೊಡುವುದನ್ನು ನಿರೂಪಿಸುವ ಪದ್ಯ:

ನೆಲಸುಗೆ ನಿನ್ನ ವಕ್ಷದೊಳೆ ನಿಶ್ಚಳಮೀ ಭಟಖಡ್ಗಮಂಡಲೋ-
ತ್ಪಲವನವಿಭ್ರಮಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ ಭೂ-
ವಲಯಮನಯ್ಯನಿತ್ತುದುಮನಾಂ ನಿನಗಿತ್ತೆಸೆದೇವುದಣ್ಣ ನೀ-
ನೊಲಿದ ಲತಾಂಗಿಗಂ ಧರೆಗಮಾಟಿಸಿದಂದು ನೆಗೞ್ತೆ ಮಾಸದೇ

ಇದು ಅಣ್ಣತಮ್ಮಂದಿರಿಬ್ಬರೂ ಒಬ್ಬರ ಮೇಲೊಬ್ಬರು ಸುರಿಸುವ ಬಾಷ್ಪಾಂಬುವನ್ನು ವರ್ಣಿಸುವ ಪದ್ಯ. ಈ ದೃಶ್ಯವೂ ಬಹು ಮನೋಹರವಾಗಿತ್ತು.

ನಿಜಪಾದಾಂಬುರುಹಕ್ಕೆ ಪಾದ್ಯವಿಧಿಯಂ ನೇತ್ರಾಂಬುವಿಂ ಮಾಡುವ-
ಗ್ರಜನತ್ಯುನ್ನತಮಪ್ಪ ಮಸ್ತಕದ ಮೇಗೋರಂತೆ ಪಾಯ್ವಾತ್ಮಬಾ-
ಷ್ಪಜಳೌಘಂಗಳಿನಂದು ಬಾಹುಬಲಿ ತನ್ನಿಂದಂ ನಿಧೀಶಂಗೆ ವಂ-
ಶಜರಾಜ್ಯಾಭಿಷವೋತ್ಸವಂ ನೆಗೞ್ದುದೆಂಬಾಶಂಕೆಯಂ ಮಾಡಿದಂ

ಎಂಥ ಭಾಷೆ, ಎಂಥ ಭಾವ, ಎಷ್ಟು ಉದಾತ್ತರಾದ ವ್ಯಕ್ತಿಗಳು ಈ ಅಣ್ಣತಮ್ಮಂದಿರು! ಅಣ್ಣನ ಅಹಂಕಾರ ತಮ್ಮನಿಂದ ನಿರಸನವಾಗುತ್ತದೆ; ತಮ್ಮನ ಮಾನಕಷಾಯ ಅಣ್ಣನಿಂದ ತೊಲಗುತ್ತದೆ: ಒಬ್ಬನಿಂದ ಮತ್ತೊಬ್ಬ ಪರಿಶೋಧಿತನಾಗಿ ಇಬ್ಬರೂ ಜ್ಞಾನಿಗಳಾಗಿ ಸುಖವನ್ನು ಪಡೆಯುತ್ತಾರೆ. ಅತ್ಯಾಶ್ಚರ್ಯಕರವಾದ ಪರಿವರ್ತನೆ, ಅಮೋಘವಾದ ಕತೆ. ಇಂಥ ದೃಶ್ಯಗಳನ್ನು ನಮ್ಮ ಕಾವ್ಯಾಂಬುರಾಶಿಯಿಂದ ಆಯ್ದೆತ್ತಿ ತೋರಿ ನಮ್ಮ ಮನಸ್ಸನ್ನು ಸಂಸ್ಕರಿಸುವ ವಿದಗ್ಧರಿಗೂ, ಭಾವಜ್ಞರಿಗೂ, ಅವರ ನೆರವಿಗೆ ನಿಂತು ಗುರುವಿನಯವನ್ನೂ ಕೃತಿವಿನಯವನ್ನೂ ಮೆರೆಸುವ ಉತ್ಸಾಹಿ ಯುವಕರಿಗೂ ನಾವು ಎಂದಿಗೂ ಕೃತಜ್ಞರು.

**ಪು. ತಿ. ನ.**

ಬಿ. ಬಿ. ಡಿ. ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು ಸಿಟಿ.

ಶ್ರೀಮಾನ್ ರಾಜರತ್ನಂ ಅವರು 'ಶ್ರೀ ಬಾಹುಬಲಿ ವಿಜಯಂ' ಎಂಬ ಮೊದಲನೆಯ ನಾಟಕಾಂಶದ ಜೊತೆಗೆ "ಶ್ರೀ ಗೋಮಟ ಶಿಲ್ಪ" ಎಂಬ ಎರಡನೆಯ ಭಾಗವನ್ನು ಸೇರಿಸಿ, ಬಾಹುಬಲಿಚರಿತ್ರೆಯ ಪರಿಪೂರ್ಣಚಿತ್ರವು ವಾಚಕರಿಗೆ ದೊರೆಯುವಂತೆ ಮಾಡಿದ್ದಾರೆ. ಈ ಎರಡು ಭಾಗಗಳಲ್ಲಿಯೂ ಅವರು ಪೂರ್ವಕವಿಗಳ ವಾಕ್ಯಗಳನ್ನೇ ಆರಿಸಿ, ರಂಗವೇದಿಕೆಯ ಸಂಭಾಷಣಸರಣಿಗೆ ಅನುಕೂಲಿಸುವಂತೆ ಆ ವಾಕ್ಯಗಳನ್ನಲ್ಲಲ್ಲಿ ಒಡೆದು, ಕೊಂಡಿಗಳನ್ನದುಕಿ, ಸರಪಣಿಯಾಗಿ ಜೋಡಿಸಿ ಅಂದಗೊಳಿಸಿರುವುದು ವಿಶೇಷದ ಸಂಗತಿ. ಅವರು ಯಾವ ಯಾವ ಕವಿಗಳಿಂದ ವಾಕ್ಯಗಳನ್ನು ಸಂಪಾದಿಸಿದ್ದಾರೆಂಬುದು ೫೦ನೆಯ ಮತ್ತು ೮೦ನೆಯ ಪುಟಗಳಲ್ಲಿ ಸೂಚಿತವಾಗಿದೆ. ಪುರಾತನ ಪಠ್ಯಕಾವ್ಯ ಗರ್ಭದಲ್ಲಿ ಹುದುಗಿಕೊಂಡಿದ್ದ ರೂಪಕಶಿಶುವನ್ನು ಗುರುತು ಹಿಡಿದು, ಮೂಲ ಕಥೆಯ ಸಾರಸನ್ನಿವೇಶಗಳನ್ನು ಪ್ರತ್ಯೇಕಮಾಡಿ ಸಂಗ್ರಹಿಸಿ, ಮೂಲಕವಿಯ ರಸಾಭಿವ್ಯಕ್ತಿಯನ್ನು ಎತ್ತಿ ತೋರಿಸಿ, ದರ್ಶನೀಯವಾಗುವಂತೆ ಕಾವ್ಯವನ್ನು ಪುನರ್ನಿರ್ಮಾಣ ಮಾಡಿರುವುದು ಮೂಲಕೃತಿಯ ಪಕ್ಕದಲ್ಲಿ ಕುಳ್ಳಿರಿಸಲರ್ಹವಾದದ್ದೆನಿಸುವಷ್ಟರ ಪ್ರತಿಭಾಕಾರ್ಯವೆಂದು ಹೇಳಬಹುದು.

## ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆಯ ವ್ಯಾಸಂಗಗೋಷ್ಠಿ

## ಅವರ ಪ್ರಕಟನೆಗಳು



1. **Some Suggestions for the Modification of the Draft Constitution of India**
   —M. RAMASWAMY **Re. 1 0 0**

2. **The United States of America: A Secular State**
   —M. RAMASWAMY **Re. 1 0 0**

3. **Law and Morality**
   —M. P. SOMASEKHARA RAO **Re. 0 8 0**

4. ಬಾಳಿಗೊಂದು ನಂಬಿಕೆ—ಡಿ. ವಿ. ಗುಂಡಪ್ಪ ರೂ. 1 0 0

5. ರಾಜ್ಯಶಾಸ್ತ್ರ—ಡಿ. ವಿ. ಗುಂಡಪ್ಪ ರೂ. 5 0 0

6. ಮಹಾತ್ಮ ಗಾಂಧಿ (ಜ್ಞಾಪಕ ಪದ್ಯಸಂಗ್ರಹ)
   —ಡಿ. ವಿ. ಗುಂಡಪ್ಪ ರೂ. 0 4 0

7. ದಾದಾಭಾಯಿ ನವರೋಜಿ
   —ಡಿ. ವಿ. ಗುಂಡಪ್ಪ ರೂ. 0 4 0

8. ಶ್ರೀ ಬಾಹುಬಲಿ ವಿಜಯಂ ಮತ್ತು
   ಶ್ರೀ ಗೋಮಟ ಶಿಲ್ಪ—ಜಿ. ಪಿ. ರಾಜರತ್ನಂ ರೂ. 1 8 0



ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆ

**ಬಸವನಗುಡಿ, ಬೆಂಗಳೂರು 4.**